# ಸಪ್ತಗಿರಿ

ಏಪ್ರಿಲ್ 84

ಬೆಲೆ: ಒಂದು ರೂಪಾಯಿ



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಭವಭವಾರ್ಜಿತ ದುರಿತ ಕೋಟಿಯ
ತವಿಸುವಗ್ಗದ ನಾಮ ಸರಸಿಜ
ಭವ ಭವಾಚ್ಯುತರಮಲ ಪದವಿಯ ನೀವ ಗುಣನಾಮ
ಶಿವನ ನಚ್ಚಿನ ನಾಮ ಗಿರಿಸಂ
ಭವೆಯ ನೇಮದ ನಾಮ ಸುರನರ
ಭುವನ ಪಾವನ ನಾಮ ಸೀತಾಪತಿಯ ಸಿರಿನಾಮ ॥೧॥

ಒಡೆವುದಘ ಸಂತತಿಯ ತಲೆದೋ
ರಿದೊಡೆ ದಹಿಸುವುದೆಡರನೌಕಿದ
ಡುರುಹಿ ಬಿಸುಡುವುದುನ್ಮದ ಪ್ರಳಯ ಪಂಚಕವ
ಮುದವನಿಹದಲಿ ಕೊಡುವುದಚ್ಯುತ
ಪದವ ಪರದೊಳಗೀವುದಿದು ನಿಗ
ಮದ ರಹಸ್ಯ ಪುರಾಣ ಪ್ರಸಿದವೆಂದು ಮುನಿನುಡಿದ ॥೨॥

– ಕುಮಾರ ವಾಲ್ಮೀಕಿ

ಸಂದರ್ಶಿಸಿ! ಅನುಗ್ರಹೀತರಾಗಿರಿ!!

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ನಾರಾಯಣವನಂ



## ವಾರ್ಷಿಕ ಬ್ರಹ್ಮೋತ್ಸವಗಳು 1984

**13-5-84** ಭಾನುವಾರ ಧ್ವಜಾರೋಹಣ
**17-5-84** ಗುರುವಾರ ಗರುಡೋತ್ಸವ
**20-5-84** ಭಾನುವಾರ ರಥೋತ್ಸವ
**21-5-84** ಸೋಮವಾರ ಚಕ್ರಸ್ನಾನ

ನಾರಾಯಣವನಕ್ಕೆ ತಿರುಪತಿಯಿಂದ ಬಸ್ಸಿನಲ್ಲಿ ಹೋಗಬಹುದು. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿ ದಿನ ... ತಿಕ ಕಾರ್ಯ
ಕ್ರಮಗಳಿರುತ್ತವೆ. ಹೆಚ್ಚಿನ ವಿವರಗಳಿಗಾಗಿ ಯಾವುದೇ ತಿ.ತಿ.ದೇ. ವಿಚಾರಣಾ ಕೇಂದ್ರದಲ್ಲಿ ವಿಚಾರಿಸಿ.

**ನೀವೂ ಬನ್ನಿ, ... ಕರೆತನ್ನಿ.**

ತಿರು... ವಸ್ಥಾನಗಳು




ಗೌರವ ಸಂಪಾದಕರು:
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ:
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





**ಸಂಪುಟ ೧೪]** **ಏಪ್ರಿಲ್ ೧೯೮೪** **[ಸಂಚಿಕೆ ೧೧**


# ವಿಷಯಸೂಚಿ

# ಸಂಪಾದಕೀಯ

ವಾಲ್ಮೀಕಿ ವ್ಯಾಸರನ್ನು ಭರತಖಂಡ ಬಹುಗೌರವದಿಂದ ನೋಡುತ್ತ ಬಂದಿದೆ. ಅವರು ವಿಶ್ವಮಾನ್ಯವಾಗುವ ಕಾವ್ಯಗಳನ್ನು ಬರೆದವರೆಂದು ಮಾತ್ರವೇ ಅಲ್ಲ, ಅವರು ಮಾನವ ಜೀವನದ ಆಳಪಾತಾಳಗಳನ್ನು ಅತ್ಯಂತ ಸೂಕ್ಷ್ಮದೃಷ್ಟಿಯಿಂದ ನೋಡಿ ಅಭಿವ್ಯಕ್ತಿಸಿದರು ಎಂಬುದರಿಂದಲೂ ಹೌದು. ಧರ್ಮದ ಜಯ ಅವರಿಗೆ ಮುಖ್ಯ ಆಗಿದ್ದಂತೆಯೇ ತಮ್ಮ ಪಾತ್ರಗಳ ಮನೋಭೂಮಿಕೆಗಳ ಸ್ಪಷ್ಟಚಿತ್ರಣವೂ ಮುಖ್ಯವೇ ಆಗಿದ್ದಿತು. ಆ ಪಾತ್ರಗಳು ನಿಜದ ನೆಲೆಯಲ್ಲಿ ನಿಂತು ನಿರಂತರ ಪ್ರತಿಕ್ರಿಯಿಸುತ್ತ ನಡೆದದ್ದರಿಂದಲೇ ಅವು ಇಂದಿಗೂ ನಾಡಿನಲ್ಲಿ, ನುಡಿಯಲ್ಲಿ, ನಡೆಯಲ್ಲಿ, ಹೆಚ್ಚೇಕೆ ನಮ್ಮ ನಡುವಿನಲ್ಲಿ ಜೀವಂತವಾಗಿವೆ. ಇಂತಹವರಲ್ಲಿ ಒಂದು ರೀತಿಯ ಹತ್ತಿರದ ಮನೋಭೂಮಿಕೆಯನ್ನು ಪರಿಸರವನ್ನು ಪಡೆದ ಎರಡು ಪಾತ್ರಗಳು ಪವಿತ್ರವಾಗುತ್ತವೆ. ಆ ಪಾತ್ರಗಳೆಂದರೆ ಸೀತೆ, ದ್ರೌಪದಿ.

ಮಾನವಸಹಜವಲ್ಲದ ಹುಟ್ಟು, ಬೆಳೆದ ರಾಜಪರಿಸರ, ಸ್ಪರ್ಧೆಯಲ್ಲಿ ಗೆದ್ದವರೊಡನೆ ವಿವಾಹ – ಮೊದಲಾದವುಗಳು ಸಮಾನವೇ ಆಗಿ ಅರಣ್ಯವಾಸವೂ ಅಭಿನ್ನವಾಗುತ್ತದೆ. ಮಾತ್ರ ಸೀತೆಯನ್ನು ಮುಗ್ಧ, ಸ್ನಿಗ್ಧ, ಸೌಂದರ್ಯದವಳೆಂದೂ, ಕೋಮಲ, ಪೂಜ್ಯ ಭಾವಗಳ ಆಗರವೆಂದೂ ತಿಳಿದರೆ, ದ್ರೌಪದಿ ಪ್ರೌಢ, ಖಚಿತ ಭಾವದವಳೆಂದು ಗುರುತಿಸಲಾಗುತ್ತದೆ. ಇಂತಹ ಗುರುತಿಸುವಿಕೆಗೆ ಕಾರಣಗಳೂ ಇಲ್ಲದಿಲ್ಲ.

ಸೀತೆ ಗಂಡನಿಂದ ದೂರಾಗಿ, ನಾರಿಯೆದೆಯೊಳಗೆ ನಾರಿನೆಳೆಯುವೊಲು ಇದ್ದ ಪುನಸ್ಸಮಾಗಮದ ಆಸೆಯಿಂದ ಬದುಕಿದ್ದವಳು. ರಾವಣವಧೆಯಾದನಂತರ ಪತಿಯನ್ನು ಸೇರುವ ತವಕದ ಅವಳಿಗೆ, ರಾಮನ ಕಠಿಣವಾದ ಮಾತುಗಳು ಕೂರ್ಗಸಿಯಾಗುತ್ತವೆ. ಅವಳೇ ನಿರ್ಧರಿಸುತ್ತಾಳೆ ಅಗ್ನಿಯನ್ನು ಸೇರಿ ಪ್ರಾಣತ್ಯಾಗ ಮಾಡಲು. ಮುಂದೆಯೂ ಮತ್ತೊಮ್ಮೆ ಶ್ರೀರಾಮನಿಂದ ದೂರಾದಳು. ಆಗಲೂ ಸ್ವನಾಶದ ಯೋಚನೆ ಮಾಡಬಹುದಿತ್ತಾದರೂ ತುಂಬಿದ ಬಸುರಿ; ಮಕ್ಕಳಿಗಾಗಿ ಬದುಕಿದಳು. ಲವಕುಶರು ರಾಮನೊಂದಿಗೆ ಯುದ್ಧದಲ್ಲಿ ತೊಡಗಿದಾಗ ಅವನಿಗೆ ಅವರಿಬ್ಬರೂ ತನ್ನ ಮಕ್ಕಳೇ ಎಂಬುದು ತಿಳಿಯಿತು. ಆಗ ಸೀತೆಯನ್ನು ಪುನಃ ಸ್ವೀಕರಿಸುವ ಯೋಚನೆ. ಅವಳಿಗೆ ಭೂಮಿಯನ್ನು ಸೇರುವುದರಲ್ಲಿ ತೃಪ್ತಿ.

ದ್ರೌಪದಿಗೆ ಇಂತಹ ಸ್ವಾಭಿಮಾನಕ್ಕೆ ಪೆಟ್ಟುಬೀಳುವ ಸಂದರ್ಭ ಬರಲಿಲ್ಲ. ಅವಳದು ಇನ್ನೊಂದುರೀತಿಯ ಅವಮಾನ. ಪತಿಗಳೈವರೂ ಅವಳ ಬಗ್ಗೆ ಗೌರವಾದರ ಪ್ರೀತಿಗಳನ್ನು ಹೊಂದಿದ್ದರೂ ಪರರಿಂದ ಪೀಡಿತಳಾದವಳು ಅವಳು. ಎಂತಲೇ ಅವರೆಲ್ಲರ ನಾಶವನ್ನು ಅಪೇಕ್ಷಿಸಿದಳು. ತಾನು ಬದುಕಿ ಉಳಿದಳು. ದುಶ್ಯಾಸನ, ಸೈಂಧವ, ಕೀಚಕ, ಪದೇಪದೇ ಒಂದೇ ರೀತಿಯ ಅವಮಾನ. ಅವಳ ಸ್ವಾಭಿಮಾನವೇನಾಗಬೇಕು, ಧರ್ಮರಾಯನಂತಹವನೂ ಸಂಧಿಯ ಮಾತನಾಡುವಾಗ ? ಎಂತಲೇ 'ರಣಚಂಡಿಯು ಆ ಬೆಂಕಿಯ ಮಗಳು' ಆಗಿ ಕೃಷ್ಣನಲ್ಲಿ ತನ್ನ ಮನದ ನೋವನ್ನು ತೋಡಿಕೊಂಡು ಯುದ್ಧವನ್ನೇ ನಿಶ್ಚಯಿಸಿ ಬರುವಂತೆ ಬೇಡಿದಳು. ಛಲವನ್ನು ಹಿಡಿದು ಗೆದ್ದಳು.

ಸೀತೆಯ ಸಾತ್ವಿಕ ಭಾವಕ್ಕೂ ದ್ರೌಪದಿಯ ರಾಜಸ ಭಾವಕ್ಕೂ ಸಂಬಂಧ ಹತ್ತಿರದ್ದು. ಸೀತೆ ಎರಡನೆಯ ಬಾರಿ ಸ್ವೀಕರಣವನ್ನು ಒಲ್ಲೆನೆಂದದ್ದೂ ಒಂದುರೀತಿಯ ರಾಜಸವೇ ಆದೀತೇನೋ ! ಅಥವಾ ದ್ರೌಪದಿ ತನ್ನ ಮಕ್ಕಳನ್ನು ಕೊಂದ ಅಶ್ವತ್ಥಾಮನ ಬಗ್ಗೆ ಸೇಡಿನ ಭಾವ ಹೊಂದದೆ ಇದ್ದದ್ದು ಒಂದು ತೆರನಾದ ಸಾತ್ವಿಕ ಭಾವವೂ ಆಗಲಾರದೇನು !

ಹೀಗಾದ್ದರಿಂದಲೇ ಇರಬೇಕು ಪರಮ ಪವಿತ್ರ ಪ್ರಾತಃಸ್ಮರಣೀಯ ಪತಿವ್ರತೆಯರ ಸಾಲಿನಲ್ಲಿ ಸೀತೆಯನ್ನೂ ದ್ರೌಪದಿಯನ್ನೂ ಸೇರಿಸಿರುವುದು.

ಏನಾದರಿರಲಿ, ಸೀತೆಯ ಸಹನೆ ಸ್ವಲ್ಪ ಹೆಚ್ಚು ಕಾಲವಿದ್ದಿತು ದ್ರೌಪದಿಯ ಸಹನೆಗಿಂತಲೂ. ಕಾರಣ ಸೀತೆಯು ಕ್ಷಮಾಪುತ್ರಿಯಾದದ್ದೂ, ದ್ರೌಪದಿ ಅನಲಪುತ್ರಿಯಾದದ್ದೂ ಇರಬೇಕು. ಆದರೆ ಒಂದು ಮಾತ್ರ ಸಿದ್ಧವಾಗುತ್ತದೆ. ಸ್ತ್ರೀಯನ್ನು ಸಹನೆಯ ಮಿತಿಯಿಂದ ಆಚೆ ನೂಕಿದರೆ ಅಲ್ಲಿ ಸ್ಫೋಟವಿರುತ್ತದೆ. ಸೀತೆಯ ಸಹನೆಯಾಚೆಯ ಸ್ಫೋಟದಲ್ಲಿ ಶಬ್ದ ಕೋಲಾಹಲವಿಲ್ಲದಿರಬಹುದು. ಪರಿಣಾಮ ಒಂದೇ; ನಿರ್ನಾಮ. ಅದು ಪುರುಷಪ್ರಪಂಚಕ್ಕೆ ಎಚ್ಚರಿಕೆಯೂ ಆಗಬಹುದು. ★

# ಶ್ರೀಮದ್ಭಗವದ್ಗೀತೆ

## ೧೧ ನೇಯ ಅಧ್ಯಾಯ

# ವಿಶ್ವರೂಪ

ಅರ್ಜುನ ಉವಾಚ –

ಮದನುಗ್ರಹಾಯ ಪರಮಂ
ಗುಹ್ಯಮಧ್ಯಾತ್ಮಸಂಜ್ಞಿತಮ್ ।
ಯತ್ತ್ವಯೋಕ್ತಂ ವಚಸ್ತೇನ
ಮೋಹೋಽಯಂ ವಿಗತೋ ಮಮ ॥ 1

ಅರ್ಜುನ : ನನ್ನನ್ನು ಅನುಗ್ರಹಿಸಲೆಂದು ಅತ್ಯಂತ ರಹಸ್ಯವಾದ ಯಾವ ಅಧ್ಯಾತ್ಮದ ಮಾತನ್ನು ನೀನು ಹೇಳಿದೆಯೋ ಅದರಿಂದ ನನ್ನ ಅಜ್ಞಾನ ದೂರವಾಯಿತು.

ಭವಾಪ್ಯಯೌ ಹಿ ಭೂತಾನಾಂ
ಶ್ರುತೌ ವಿಸ್ತರಶೋ ಮಯಾ ।
ತ್ವತ್ತಃ ಕಮಲಪತ್ರಾಕ್ಷ
ಮಾಹಾತ್ಮ್ಯಮಪಿ ಚಾವ್ಯಯಮ್ ॥ 2

ಕೃಷ್ಣ, ಎಲ್ಲ ಭೂತಗಳ ಹುಟ್ಟು ಸಾವುಗಳನ್ನೂ ಅಚ್ಚಳಿಯದಂಥ ನಿನ್ನ ಹೆಚ್ಚುಗಾರಿಕೆಗಳನ್ನೂ ನಿನ್ನಿಂದ ವಿವರವಾಗಿ ಕೇಳಿದೆನು.

ಏವಮೇತದ್ಯಥಾತ್ಥ ತ್ವಂ
ಆತ್ಮಾನಂ ಪರಮೇಶ್ವರ ।
ದ್ರಷ್ಟುಮಿಚ್ಛಾಮಿ ತೇ ರೂಪಂ
ಐಶ್ವರಂ ಪುರುಷೋತ್ತಮ 3

ಕೃಷ್ಣ, ನೀನು ನಿನ್ನ ವಿಷಯದಲ್ಲಿ ಯಾವ ರೀತಿಯಲ್ಲಿ ಹೇಳಿದೆಯೋ ಅದು ಹಾಗೆಯೇ ಸರಿ. ನಿನ್ನ ಈಶ್ವರತತ್ತ್ವದ ರೂಪವನ್ನು ನೋಡಬೇಕೆಂದು ಬಯಕೆಯುಂಟಾಗಿದೆ.

ಮನ್ಯಸೇ ಯದಿ ತಚ್ಛಕ್ಯಂ
ಮಯಾ ದ್ರಷ್ಟುಮಿತಿ ಪ್ರಭೋ ।
ಯೋಗೇಶ್ವರ ತತೋ ಮೇ ತ್ವಂ
ದರ್ಶಯಾತ್ಮಾನಮವ್ಯಯಮ್ ॥ 4

ಕೃಷ್ಣ, ನಾನು ಅದನ್ನು ನೋಡಲಾಗುವುದೆಂದು ನಿನಗೆ ತೋರಿದರೆ ನೀನು ನನಗೆ ನಾಶರಹಿತವಾದ ನಿನ್ನ ರೂಪವನ್ನು ಕಾಣಿಸು.

ಶ್ರೀ ಭಗವಾನುವಾಚ –

ಪಶ್ಯ ಮೇ ಪಾರ್ಥ ರೂಪಾಣಿ
ಶತಶೋಽಥ ಸಹಸ್ರಶಃ ।
ನಾನಾವಿಧಾನಿ ದಿವ್ಯಾನಿ
ನಾನಾವರ್ಣಾಕೃತೀನಿ ಚ ॥ 5

ಶ್ರೀಕೃಷ್ಣ : ಅರ್ಜುನ, ನಾನಾ ಬಗೆಯ ನಾನಾ ಬಣ್ಣ – ಆಕಾರಗಳ, ಲೋಕೋತ್ತರಗಳಾದ ನನ್ನ ನೂರಾರು, ಸಾವಿರಾರು ರೂಪಗಳನ್ನು ನೋಡು,

ಪಶ್ಯಾದಿತ್ಯಾನ್ ವಸೂನ್ ರುದ್ರಾನ್
ಅಶ್ವಿನೌ ಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ
ಪಶ್ಯಾಶ್ಚರ್ಯಾಣಿ ಭಾರತ ॥ 5

ಅರ್ಜುನ, ಆದಿತ್ಯರನ್ನೂ ರುದ್ರರನ್ನೂ ಅಶ್ವಿನೀ ದೇವತೆಗಳನ್ನೂ ಮರುತರನ್ನೂ ನೋಡು. ಹಾಗೆಯೇ ನೀನು ಎಂದೂ ಕಾಣದ ಅನೇಕ ಅದ್ಭುತ ರೂಪಗಳನ್ನು ನೋಡು.

ಇಹೈಕಸ್ಥಂ ಜಗತ್ಕೃತ್ಸ್ನಂ
ಪಶ್ಯಾದ್ಯ ಸಚರಾಚರಮ್ ।
ಮಮ ದೇಹೇ ಗುಡಾಕೇಶ
ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ 7

ಅರ್ಜುನ, ಇಲ್ಲಿ ನನ್ನ ದೇಹದಲ್ಲಿ ಒಂದು ಕಡೆ ಸೇರಿರುವ ಎಲ್ಲ ಚರಾಚರ ಜಗತ್ತನ್ನು ಮತ್ತು ಬೇರೆ ಏನೇನನ್ನು ನೋಡಬೇಕೆಂದು ಬಯಸುತ್ತಿಯೋ ಅದನ್ನೆಲ್ಲ ಈಗ ನೋಡು.

ನ ತು ಮಾಂ ಶಕ್ಯಸೇ ದ್ರಷ್ಟುಂ
ಅನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ
ಪಶ್ಯ ಮೇ ಯೋಗಮೈಶ್ವರಮ್ ॥ 8

ಈ ನಿನ್ನ ಕಣ್ಣಿನಿಂದ ನನ್ನನ್ನು ನೀನು ನೋಡಲಾರೆ. ನಿನಗೆ ದಿವ್ಯವಾದ ದೃಷ್ಟಿಯನ್ನು ಕೊಡುತ್ತೇನೆ. ನನ್ನ ಸರ್ವೇಶ್ವರತ್ವವನ್ನು ತೋರಿಸುವ ಮಹಿಮಾವಿಶೇಷವನ್ನು ನೀನು ನೋಡು

ಸಂಜಯ ಉವಾಚ –

ಏವಮುಕ್ತ್ವಾ ತತೋ ರಾಜನ್
ಮಹಾಯೋಗೇಶ್ವರೋ ಹರಿಃ ।
ದರ್ಶಯಾಮಾಸ ಪಾರ್ಥಾಯ
ಪರಮಂ ರೂಪಮೈಶ್ವರಮ್ ॥ 9

ಸಂಜಯ: ಧೃತರಾಷ್ಟ್ರ, ಆಮೇಲೆ ಮಹಾಮಹಿಮನಾದ ಶ್ರೀಕೃಷ್ಣನು ಹೀಗೆ ಹೇಳಿ ಅರ್ಜುನನಿಗೆ ಈಶ್ವರತ್ವವನ್ನು ಸೂಚಿಸುವ ಉತ್ಕೃಷ್ಟವಾದ ರೂಪವನ್ನು ತೋರಿಸಿದನು.



ಅನೇಕವಕ್ತ್ರನಯನಂ
ಅನೇಕಾದ್ಭುತದರ್ಶನಮ್ ।
ಅನೇಕದಿವ್ಯಾಭರಣಂ
ದಿವ್ಯಾನೇಕೋದ್ಯತಾಯುಧಮ್ ॥ 10

ಆ ದಿವ್ಯ ರೂಪಕ್ಕೆ ಅನಂತ ಮುಖಗಳು, ಕಣ್ಣುಗಳು, ಬೆರಗುಮಾಡುವ ಅನಂತ ನೋಟಗಳು, ಝಗಝಗಿಸುವ ಅನಂತ ಆಭರಣಗಳು, ಎತ್ತಿ ಹಿಡಿದುಕೊಂಡಿರುವ ಅನೇಕ ದಿವ್ಯಾಯುಧಗಳು.

ದಿವ್ಯಮಾಲ್ಯಾಂಬರಧರಂ
ದಿವ್ಯಗಂಧಾನುಲೇಪನಮ್ ।
ಸರ್ವಾಶ್ಚರ್ಯಮಯಂ ದೇವಂ
ಅನಂತಂ ವಿಶ್ವತೋಮುಖಮ್ ॥ 11

ತೊಟ್ಟಿರುವ ದಿವ್ಯ ಹಾರಗಳು, ಉಟ್ಟಿರುವ ದಿವ್ಯ ವಸ್ತ್ರಗಳು, ಮೈಗೆ ಬಳಿದ ದಿವ್ಯ ಗಂಧ – ಎಲ್ಲ ವಿಸ್ಮಯಗಳ ನೆಲೆ, ಭಗವಂತನ ಅನಂತವಾದ ಈ ದಿವ್ಯ ರೂಪಕ್ಕೆ ಕಂಡ ಕಡೆಯೆಲ್ಲ ಮೋರೆ.

ದಿವಿ ಸೂರ್ಯಸಹಸ್ರಸ್ಯ
ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾತ್
ಭಾಸಸ್ತಸ್ಯ ಮಹಾತ್ಮನಃ ॥ 12

ಆಕಾಶದಲ್ಲಿ ಸಾವಿರಾರು ಸೂರ್ಯರ ಬೆಳಕು ಒಂದೇ ಸಲಕ್ಕೆ ಹೊರಹೊಮ್ಮಿದರೆ ಅದು ಆ ವಿಶ್ವರೂಪದ ಬೆಳಕಿಗೆ ಸಮಾನವಾದದ್ದಾದೀತು.

ತತ್ರೈಕಸ್ಥಂ ಜಗತ್ಕೃತ್ಸ್ನಂ
ಪ್ರವಿಭಕ್ತಮನೇಕಧಾ ।
ಅಪಶ್ಯದ್ದೇವದೇವಸ್ಯ
ಶರೀರೇ ಪಾಂಡವಸ್ತದಾ ॥ 13

ಆ ಕೃಷ್ಣನ ದೇಹದಲ್ಲಿ ಆಗ ಅರ್ಜುನನು ಅನೇಕ ಬಗೆಯಾಗಿ ಬಿಡಿಬಿಡಿಯಾಗಿ ಒಂದೇ ಕಡೆ ಇರುವ ಎಲ್ಲ ಜಗತ್ತನ್ನೂ ನೋಡಿದನು.

ತತಃ ಸ ವಿಸ್ಮಯಾವಿಷ್ಟೋ
ಹೃಷ್ಟರೋಮಾ ಧನಂಜಯಃ ।
ಪ್ರಣಮ್ಯ ಶಿರಸಾ ದೇವಂ
ಕೃತಾಂಜಲಿರಭಾಷತ ॥ 14

ಆಮೇಲೆ ಬೆರಗಾದವನಾಗಿ ಮೈನವಿರೆದ್ದ ಅರ್ಜುನನು ತಲೆಯಿಂದ ಕಾಲಿಗೆರಗಿ ಕೈ ಮುಗಿದುಕೊಂಡು ಕೃಷ್ಣನೊಡನೆ ಬಿನ್ನವಿಸಿಕೊಂಡನು.

ಅರ್ಜುನ ಉವಾಚ–

ಪಶ್ಯಾಮಿ ದೇವಾಂಸ್ತವ ದೇವ ದೇಹೇ
ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।
ಬ್ರಹ್ಮಾಣಮೀಶಂ ಕಮಲಾಸನಸ್ಥಂ
ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥

ಅರ್ಜುನ: ಕೃಷ್ಣ, ನಿನ್ನ ಶರೀರದಲ್ಲಿ ದೇವವಿಗಳನ್ನೂ, ಮತ್ತು ಎಲ್ಲ ಭೂತಗಳ ಸಮುದಾಯವನ್ನೂ ಬ್ರಹ್ಮನನ್ನೂ, ಅವನ ಜೊತೆಯಲ್ಲಿ ಆಸೀನನಾದ ಶಂಕರನನ್ನೂ, ಎಲ್ಲ ಋಷಿಗಳನ್ನೂ, ದೇವಲೋಕದ ವಾಸುಕಿ ಮೊದಲಾದ ಸರ್ಪಗಳನ್ನೂ ನಾನು ನೋಡುತ್ತಿದ್ದೇನೆ

ಅನೇಕಬಾಹೂದರವಕ್ತ್ರನೇತ್ರಂ
ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ।
ನಾಂತಂ ನ ಮಧ್ಯಂ ನ ಪುನಸ್ತವಾದಿಂ
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ 16

ಎಲ್ಲ ಕಡೆಗೂ ಹರಡಿಕೊಂಡಿರುವ ಅನಂತ ರೂಪಗಳುಳ್ಳ ಅಸಂಖ್ಯ ತೋಳು, ಹೊಡು, ಮುಖ, ಕಣ್ಣುಗಳುಳ್ಳ ನಿನ್ನನ್ನು ನೋಡುತ್ತಿದ್ದೇನೆ. ಹೇ ! ಸ್ವಾಮಿ ವಿಶ್ವರೂಪ, ನಿನ್ನ ಕೊನೆಯನ್ನೂ ನಡುವನ್ನೂ ಮೊದಲನ್ನೂ ಕಾಣೆನು.

ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ।
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್
ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥

ಕಿರೀಟವನ್ನಿಟ್ಟು ಗದೆಯನ್ನು ಹಿಡಿದು ಚಕ್ರವನ್ನು ತಿರುಗಿಸುತ್ತ ಎಲ್ಲ ಕಡೆಯಲ್ಲಿಯೂ ಬೆಳಗುವ ತೇಜಸ್ಸಿನ ಪುಂಜವಾಗಿ ಕಣ್ಣುಕುಕ್ಕುತ್ತಿರುವ ಝಗಝಗಿಸುವ ಬೆಂಕಿಯಂತೆ, ಸೂರ್ಯನಂತೆ ಬೆಳಗುವ ಅಪ್ರಮೇಯಮೂರ್ತಿಯಾದ ನಿನ್ನನ್ನು ಕಾಣುತ್ತಿದ್ದೇನೆ.

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥

ನೀನು ನಾಶವಿಲ್ಲದವನು; ತಿಳಿಯಬೇಕಾದ ಪರತತ್ತ್ವ; ನೀನು ಈ ಜಗತ್ತಿಗೆಲ್ಲ ಹಿರಿಯ ಆಶ್ರಯ. ನೀನು ವೃದ್ಧಿ ಕ್ಷಯಗಳಿರದವನು; ಎಂದೆಂದಿಗೂ ಇರುವಂತೆ ಕರ್ಮವನ್ನು ಕಾಪಾಡುವವನು; ನೀನು ಸನಾತನವಾದ ಪರಮಪುರುಷ – ಎಂದು ನಾನು ಬಲ್ಲೆ.

ಅನಾದಿಮಧ್ಯಾಂತಮನಂತವೀರ್ಯಂ
ಅನಂತಬಾಹುಂ ಶಶಿಸೂರ್ಯನೇತ್ರಮ್ ।
ಪಶ್ಯಾಮಿ ತ್ವಾಂ ದೀಪ್ತ ಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪಂತಮ್ ॥ 19

ನೀನು ಮೊದಲೂ ನಡುವೆಯೂ ಕೊನೆಯೂ ಇಲ್ಲದವನು. ನಿನ್ನ ಪರಾಕ್ರಮಕ್ಕೆ ಕೊನೆ ಇಲ್ಲ. ನಿನ್ನ ತೋಳುಗಳಿಗೆ ಲೆಕ್ಕವಿಲ್ಲ. ಚಂದ್ರನೂ ಸೂರ್ಯನೂ ನಿನ್ನ ಕಣ್ಣುಗಳು. ನಿನ್ನ ಮುಖವು ಬೆಂಕಿಯುಗುಳುತ್ತಿದೆ. ನಿನ್ನಯ ಬೆಳಕಿನಿಂದ ಜಗತ್ತನ್ನೆಲ್ಲ ಸುಡುವ ನಿನ್ನನ್ನು ನೋಡುತ್ತಿದ್ದೇನೆ.

ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।
ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥

ನಿನ್ನೊಬ್ಬನಿಂದಲೇ ಭೂಮ್ಯಾಕಾಶಗಳ ಈ ನಡುವಣ ಬಯಲೆಲ್ಲ, ದಿಕ್ಕುಗಳೆಲ್ಲ ತುಂಬಿವೆ. ಹೇ ವಿಶ್ವರೂಪ ! ನಿನ್ನ ಭಯಂಕರವಾದ ಈ ಆಶ್ಚರ್ಯಕರ ರೂಪವನ್ನು ನೋಡಿ ಮೂರು ಲೋಕಗಳೂ ಕಳವಳಗೊಳ್ಳುತ್ತಿರುವುವು.

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥

ದೇವತೆಗಳೆಲ್ಲ ನಿನ್ನೊಳಗೆ ಹೋಗುತ್ತಿದ್ದಾರೆ. ಕೆಲವರು ಹೆದರಿ ಕೈಜೋಡಿಸಿ ನಿನ್ನನ್ನು ಕೊಂಡಾಡುತ್ತಿದ್ದಾರೆ. ಮಹರ್ಷಿಗಳೂ ಸಿದ್ಧರೂ ಎಲ್ಲರೂ ಜಗತ್ತಿಗೆ ಶುಭವಾಗಲೆಂದು ಹರಕೆಯನ್ನು ಹೊತ್ತು ನಿನ್ನನ್ನು ಬೇಕಾದಷ್ಟು ಸ್ತೋತ್ರಗಳಿಂದ ಹೊಗಳುತ್ತಿದ್ದಾರೆ.

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾಃ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।
ಗಂಧರ್ವಯಕ್ಷಾಸುರಸಿದ್ಧಸಂಘಾಃ
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥

ರುದ್ರರೂ ಸೂರ್ಯರೂ ವಸುಗಳೂ ಸಾಧ್ಯರೂ ವಿಶ್ವೇದೇವತೆಗಳೂ ಅಶ್ವಿನೀ ಕುಮಾರರೂ ವಾಯುಗಳೂ ಪಿತೃದೇವತೆಗಳೂ ಗಂಧರ್ವರೂ ಯಕ್ಷರೂ ಅಸುರರೂ ಸಿದ್ಧರೂ ಈ ಎಲ್ಲರೂ ಬೆರಗಾಗಿ ನಿನ್ನನ್ನು ನೋಡುತ್ತಿದ್ದಾರೆ.

ರೂಪಂ ಮಹತ್ತೇ ಬಹುವಕ್ತ್ರನೇತ್ರಂ
ಮಹಾಬಾಹೋ ಬಹುಬಾಹೂರು ಪಾದಮ್ ।
ಬಹೂದರಂ ಬಹುದಂಷ್ಟ್ರಾಕರಾಲಂ
ದೃಷ್ಟ್ವಾ ಲೋಕಾಃ ಪ್ರವ್ಯಥಿತಾ ಸ್ತಥಾಹಮ್ ॥ 23

ಕೃಷ್ಣ, ಅನೇಕ ಮುಖ, ಕಣ್ಣುಗಳ, ಅನೇಕ ತೋಳುಗಳ, ತೊಡೆಗಳ, ಹೆಜ್ಜೆಗಳ, ಅನೇಕ ಹೊಟ್ಟೆಗಳೂ ಇರುವ ನಿನ್ನ ಈ ಬೃಹದ್ ರೂಪವನ್ನು ನೋಡಿ ಎಲ್ಲ ಲೋಕಗಳೂ ನಾನೂ ಕಳವಳಗೊಂಡಿರುವೆವು.

ನಭಃಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।

ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ ॥ 38

ನೀನು ಮೊದಲನೇ ದೇವನು; ಜಗತ್ತಿನಲ್ಲೆಲ್ಲ ತುಂಬಿಕೊಂಡಿರುವ ಪುರಾಣಪುರುಷನು. ನೀನೇ ಈ ಜಗತ್ತಿಗೆ ಮುಖ್ಯಾಧಾರನು; ನೀನು ಎಲ್ಲವನ್ನು ತಿಳಿದವನು ಮತ್ತು ಎಲ್ಲರಿಂದ ತಿಳಿಯಬೇಕಾದವನು; ನೀನು ಪರಮತೇಜೋಮಯನು; ಅನೇಕ ಬಗೆಯ ರೂಪವುಳ್ಳವನೇ, ನೀನು ಜಗತ್ತಿನಲ್ಲೆಲ್ಲ ವ್ಯಾಪಿಸಿಕೊಂಡಿರುವೆ.

ವಾಯುರ್ಯಮೋಽಗ್ನಿರ್ವರುಣಃ
ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥

ನೀನು ವಾಯು, ಯಮ, ಅಗ್ನಿ, ವರುಣ, ಚಂದ್ರ ಪ್ರಜಾಪತಿ, ಜಗತ್ತಿನ ಪಿತಾಮಹನಾದ ಬ್ರಹ್ಮನಿಗೂ ತಂದೆ, ನಿನಗೆ ಸಾವಿರಾರು ಸಲ ನಮಸ್ಕಾರ, ಮತ್ತೆ ಮತ್ತೆ ನಿನಗೆ ನಮಸ್ಕಾರ, ನಮಸ್ಕಾರ.

ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ ।
ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥

ಸರ್ವರೂಪನೇ, ನಿನಗೆ ಮುಂಗಡೆಯಿಂದ ನಮಸ್ಕಾರ. ನಿನ್ನ ಶೌರ್ಯ ಅನಂತ. ಪರಾಕ್ರಮ ಅಪಾರ. ನೀನು ಜಗತ್ತಿನಲ್ಲೆಲ್ಲ ತುಂಬಿ ಕೊಂಡಿರುವೆ. ಆದ್ದರಿಂದ ನೀನು ಸರ್ವರೂಪನೆನಿಸಿರುವೆ.

ಸಖೇತಿ ಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ
ಅಜಾನತಾ ಮಹಿಮಾನಂ ತವೇದಂ
ಮಯಾ ಪ್ರಮಾದಾತ್ಪ್ರಣಯೇನ ವಾಽಪಿ ॥

ಯಚ್ಚಾವಹಾಸಾರ್ಥಮಸತ್ಕೃತೋಽಸಿ
ವಿಹಾರಶಯ್ಯಾಸನಭೋಜನೇಷು ।
ಏಕೋಽಥವಾಪ್ಯಚ್ಯುತ ತತ್ ಸಮಕ್ಷಂ
ತತ್ ಕ್ಷಾಮಯೇ ತ್ವಾಮಹಮಪ್ರ
ಮೇಯಮ್ ॥ 42

ನಿನ್ನ ಈ ಮಹಿಮೆಯನ್ನು ತಿಳಿಯದೆ ನಾನು ಅವಿವೇಕದಿಂದಲೋ ಪ್ರೀತಿಯಿಂದಲೋ ಗೆಳೆಯನೆಂದು ತಿಳಿದು ಕೃಷ್ಣ, ಯಾದವ, ಗೆಳೆಯ ಎಂದು ದುಡುಕಿನಿಂದ ಆಡಿದ ಮಾತುಗಳನ್ನೂ, ಆಟವಾಡುವಾಗ, ಮಲಗಿರುವಾಗ, ಕುಳಿತಿರುವಾಗ ಉಣ್ಣುವಾಗ, ಒಂಟಿಯಾಗಿರುವಾಗ ಅಥವಾ ಗೆಳೆಯರೆದುರಿಗೆ ಹಾಸ್ಯಕ್ಕಾಗಿ ನಿನ್ನನ್ನು ಅವಮಾನಗೊಳಿಸಿದರೆ, ಓ ಕೃಷ್ಣ, ಅಳೆಯಲಾಗದ ಎತ್ತರದಲ್ಲಿ ನಿಂತ ನೀನು ಅದನ್ನೆಲ್ಲ ಕ್ಷಮಿಸೆಂದು ಬೇಡಿಕೊಳ್ಳುತ್ತೇನೆ.

ಪಿತಾಸಿ ಲೋಕಸ್ಯ ಚರಾಚರಸ್ಯ
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ
ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ 43

ಕೃಷ್ಣ, ನೀನು ಈ ಚರಾಚರವಾದ ಜಗತ್ತಿಗೆಲ್ಲ ತಂದೆ, ನೀನು ಪೂಜೆಗೆ ಯೋಗ್ಯನು ಮತ್ತು ಗುರು, ಅಲ್ಲದೆ ಇನ್ನೂ ಹೆಚ್ಚಿನವನು. ಮೂರು ಲೋಕಗಳಲ್ಲಿಯೂ ನಿನಗೆ ಸಮರಿಲ್ಲ ಇನ್ನು ನಿನಗಿಂತ ಹೆಚ್ಚಿನವರು ಹೇಗೆ ಇದ್ದಾರು? ನಿನ್ನ ಮಹಿಮೆಗೆ ಎಣೆಯಿಲ್ಲ.

ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ
ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ
ಸೋಢುಮ್ ॥ 44

ಆದ್ದರಿಂದ ಜಗತ್ತಿಗೆಲ್ಲ ಒಡೆಯನಾದ ಮತ್ತು ಹೊಗಳಿಕೆಗೆ ಪಾತ್ರನಾದ ನಿನಗೆ ಅಡ್ಡ ಬಿದ್ದು ಮೈಬಾಗಿಸಿ ಪ್ರಸನ್ನನಾಗೆಂದು ನಾನು ನಿನ್ನನ್ನು ಬೇಡಿಕೊಳ್ಳುತ್ತೇನೆ. ಕೃಷ್ಣ ಮಗುವನ್ನು ತಂದೆಯೂ, ಗೆಳೆಯನನ್ನು ಗೆಳೆಯನೂ, ಹೆಂಡತಿಯನ್ನು ಗಂಡನೂ, ಮನ್ನಿಸುವಂತೆ ನೀನು ಮನ್ನಿಸಬೇಕು.

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ ।
ತದೇವ ಮೇ ದರ್ಶಯ ದೇವರೂಪಂ
ಪ್ರಸೀದ ದೇವೇಶ ಜಗನ್ನಿವಾಸ ॥ 45

ಹಿಂದೆ ಎಂದೂ ಕಾಣದ ಇದನ್ನು ನೋಡಿ ಹರ್ಷಗೊಂಡಿರುವೆನು. ಹೆದರಿ ನನ್ನ ಮನಸು ಕಳವಳಗೊಂಡಿರುವುದು. ಕೃಷ್ಣ, ನನಗೆ ಆ (ಗೆಳೆತನದ ರೂಪವನ್ನೇ ತೋರಿಸು; ದೇವತೆಗಳೊಡೆಯನೆ, ಜಗತ್ತಿನ ಆಧಾರನೇ! ಪ್ರಸನ್ನನಾಗು.

ಕಿರೀಟಿನಂ ಗದಿನಂ ಚಕ್ರಹಸ್ತಂ
ಇಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವ ವಿಶ್ವಮೂರ್ತೇ ॥46

ಕಿರೀಟವನ್ನಿಟ್ಟುಕೊಂಡು ಗದೆಯನ್ನು ಹಿಡಿದು ಚಕ್ರವನ್ನು ತಿರುಗಿಸುತ್ತಿರುವ ನಿನ್ನನ್ನು ಹಿಂದಿನಂತೆ ನೋಡಬೇಕೆಂದು ನಾನು ಬಯಸುತ್ತೇನೆ. ಸಾವಿರಾರು ತೋಳುಗಳುಳ್ಳ ಓ ವಿಶ್ವರೂಪನೇ, ನಾಲ್ಕು ತೋಳುಗಳುಳ್ಳ ಆ ರೂಪದಿಂದಲೇ ಕಾಣಿಸು.

ಶ್ರೀಭಗವಾನುವಾಚ –

ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್
ತೇಜೋಮಯಂ ವಿಶ್ವಮನಂತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟ ಪೂರ್ವಮ್ ॥

ಶ್ರೀಕೃಷ್ಣ ಅರ್ಜುನನೆ, ಬೇರೆ ಯಾರೂ ಎಂದೂ ಕಂಡಿರದ, ಬೆಳಕಿನಿಂದ ತುಂಬಿದ, ಎಲ್ಲಕ್ಕೂ ಕಾರಣವಾದ, ನನ್ನ ಈ ಅನಂತವಾದ ಹಿರಿಯ ವಿಶ್ವರೂಪವನ್ನು ನಾನು ನನ್ನ ಸಾಮರ್ಥ್ಯದಿಂದ ನಿನ್ನ ಮೇಲೆ ಅನುಗ್ರಹಿಸಿ ತೋರಿಸಿದೆನು.

ನ ವೇದಯಜ್ಞಾಧ್ಯಯನೈರ್ನ ದಾನೈಃ
ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।
ಏವಂರೂಪಃ ಶಕ್ಯ ಅಹಂ ನೃಲೋಕೇ
ದೃಷ್ಟುಂ ತ್ವದನ್ಯೇನ ಕುರುಪ್ರವೀರ ॥ 48

ಅರ್ಜುನ, ಹೀಗಿರುವ ನನ್ನನ್ನು ಭೂಲೋಕದಲ್ಲಿ ನೋಡುವುದಕ್ಕೆ ನಿನ್ನ ಹೊರತು ವೇದಗಳ ಅಧ್ಯಯನದಿಂದಲೂ ಯಜ್ಞಗಳಿಂದಲೂ ದಾನಗಳಿಂದಲೂ, ಕರ್ಮಗಳಿಂದಲೂ, ಉಗ್ರವಾದ ತಪಸ್ಸುಗಳಿಂದಲೂ ಸಾಧ್ಯವಾಗದು.

ಮಾ ತೇ ವ್ಯಥಾ ಮಾ ಚ ವಿಮೂಢಭಾವೋ
ದೃಷ್ಟ್ವಾರೂಪಂ ಘೋರಮೀದೃಙ್ಮ
ಮೇದಮ್ ।
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ
ತದೇವ ಮೇ ರೂಪಮಿದಂ ಪ್ರಪಶ್ಯ ॥ 49

ಈ ಬಗೆಯ ನನ್ನ ಈ ಭಯಂಕರವಾದ ರೂಪವನ್ನು ನೋಡಿ ನಿನಗೆ ಕಳವಳವಾಗದಿರಲಿ. ಮನಸ್ಸು ಮುಂದುಗಾಣದಂತೆಯೂ ಆಗದಿರಲಿ. ಹೆದರಿಕೆಯನ್ನು ಬಿಟ್ಟು ಪ್ರಸನ್ನವಾದ ಮನಸ್ಸಿನಿಂದ ಮತ್ತೆ ನೀನು ನನ್ನ ಆ (ಹಿಂದಿನ) ಈ ರೂಪವನ್ನು ಚೆನ್ನಾಗಿ ನೋಡು.

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ
ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।
ಆಶ್ವಾಸಯಾಮಾಸ ಚ ಭೀತಮೇನಂ
ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥

ಸಂಜಯ : ಕೃಷ್ಣನು ಅರ್ಜುನನನ್ನು ಕುರಿತು ಹೀಗೆ ಹೇಳಿ ಮತ್ತೆ ತನ್ನ (ಹಿಂದಿನ) ರೂಪವನ್ನು ತೋರಿಸಿದನು. ಕೃಷ್ಣನು ಮತ್ತೆ ಮನೋಹರವಾದ ದೇಹವುಳ್ಳವನಾಗಿ ಆ ಹೆದರಿದ ಅರ್ಜುನನನ್ನು ಸಮಾಧಾನಗೊಳಿಸಿದನು.

ದೃಷ್ಟ್ವೇದಂ ಮಾನುಷಂ ರೂಪಂ
ತವ ಸೌಮ್ಯಂ ಜನಾರ್ದನ ।
ಇದಾನೀಮಸ್ಮಿ ಸಂವೃತ್ತಃ
ಸಚೇತಾಃ ಪ್ರಕೃತಿಂ ಗತಃ ॥ 51

( 6ನೇ ಪುಟ ನೋಡಿ)

# ಧರ್ಮಾತ್ಮನಾದ ವಿಭೀಷಣ

ವಾಲ್ಮೀಕಿರಾಮಾಯಣದ ಪಾತ್ರಗಳಲ್ಲಿ ವಿಭೀಷಣನ ಪಾತ್ರವು ಅತ್ಯಾಕರ್ಷಕವಾಗಿಯೂ ಆದರ್ಶಪೂರ್ಣವೂ ಆಗಿದೆ. ಆತನ ಚರ್ಯೆಗಳೆಲ್ಲ ಸುಂದರಕಾಂಡ ಮತ್ತು ಯುದ್ಧಕಾಂಡಗಳಲ್ಲಿ ಮಾತ್ರ ಪ್ರದರ್ಶಿತವಾಗಿವೆ. ಉತ್ತರಕಾಂಡದಲ್ಲಿ ಸ್ವಲ್ಪ ಸೂಚಿತವಾಗಿದ್ದರೂ ಅವು ಅಷ್ಟು ಪ್ರಧಾನವಾಗಿಲ್ಲ. ೫–೬ನೆಯ ಕಾಂಡಗಳಲ್ಲಿ ಕಂಡು ಬರುವ ವಿಭೀಷಣನ ನಯ, ವಿನಯ, ಧರ್ಮಶ್ರದ್ಧೆ, ಕಾರ್ಯನಿಷ್ಠೆ, ನ್ಯಾಯವಾದಿತ್ವಾದಿ ಸದ್ಗುಣಗಳು ಅವನನ್ನು ಆದರ್ಶವ್ಯಕ್ತಿಯನ್ನಾಗಿ ಮಾಡಿವೆ. ರಾಕ್ಷಸ ಕುಲದಲ್ಲಿಯೇ ಹುಟ್ಟಿ ರಾಕ್ಷಸರ ಪರಿಸರದಲ್ಲಿಯೇ ಬೆಳೆದವನಾದರೂ ರಾಕ್ಷಸನಾದ ಅವನಲ್ಲಿ ರಾಕ್ಷಸಚೇಷ್ಟೆಗಳಿಲ್ಲದಿದ್ದುದು ಅವನ ಪರಮ ವೈಶಿಷ್ಟ್ಯ. ಈ ವಿಷಯವನ್ನು ಅವನ ತಂಗಿಯಾದ ಶೂರ್ಪನಖಿಯು ಶ್ರೀರಾಮನಿಗೆ ತನ್ನ ಪರಿಚಯವನ್ನು ಮಾಡಿಕೊಳ್ಳುವಾಗ ಸ್ಪಷ್ಟವಾಕ್ಯದಲ್ಲಿ ತಿಳಿಸುತ್ತಾಳೆ, 'ವಿಭೀಷಣೋಽಪಿ ಧರ್ಮಾತ್ಮಾ ನತು ರಾಕ್ಷಸಚೇಷ್ಟಿತಃ' ಎಂದು. ಈ ಮಾತಿನ ಅರ್ಥ ನಮಗೆ ಸುಂದರಕಾಂಡದವರೆಗೆ ವಿಶದವಾಗುವುದಿಲ್ಲ.

ವಿಭೀಷಣನು ರಾವಣನ ಬಲ ತಮ್ಮ. ಕಿರಿಯ ವಯಸ್ಸಿನಲ್ಲಿ ವಿಶೇಷ ತಪಸ್ಸು ಮಾಡಿ ಅದ್ಭುತವಾದ ಶಕ್ತಿಗಳನ್ನು ಪಡೆದನು. ಅದನ್ನು ಅವನು ಎಂದೂ ದುರುಪಯೋಗಿಸಿದವನಲ್ಲ. ಅಣ್ಣನಾದ ರಾವಣನಲ್ಲಿ ವಿಶೇಷ ವಿನಯಭಕ್ತಿಗಳಿಂದ ನಡೆದುಕೊಂಡು, ಅವನ ಆಸ್ಥಾನ–ಸಚಿವರಲ್ಲೊಬ್ಬನಾಗಿದ್ದನು. ಸುಂದರಕಾಂಡದಲ್ಲಿ ಆಂಜನೇಯನು ಸೀತಾದೇವಿಯ ಸಂದರ್ಶನಮಾಡಿ ರಾವಣನ ಬಲಪರೀಕ್ಷೆಗಾಗಿ ಅಶೋಕವನವನ್ನು ನಾಶಗೊಳಿಸುವನು. ಆ ಸಂದರ್ಭದಲ್ಲಿ ಅವನು ಇಂದ್ರಜಿತುವಿನಿಂದ ಬ್ರಹ್ಮಾಸ್ತ್ರಪ್ರಯೋಗದ ಮೂಲಕ ಬಂಧಿತನಾಗಿ, ರಾವಣನ ಆಸ್ಥಾನಕ್ಕೆ ಕರೆತರಲ್ಪಡುವನು. ಆಂಜನೇಯನು ರಾವಣನಿಗೆ ತನ್ನ ಪರಿಚಯವನ್ನು ಮಾಡಿಕೊಂಡು ಸೀತಾದೇವಿಯನ್ನು ತಕ್ಷಣ ರಾಮನಿಗೆ ಒಪ್ಪಿಸುವುದು ಸೂಕ್ತವೆಂದು ಉಪದೇಶಿಸುವನು. ಅದರಿಂದ ರಾವಣನು ಕೋಪಭೀಷಣನಾಗಿ ದೂತನಾದ ಆ ಹನುಮಂತನನ್ನು ವಧಿಸುವಂತೆ ಆಜ್ಞೆ ಮಾಡುವನು. ಅಲ್ಲಿಯೇ ಇದ್ದ ನ್ಯಾಯವಾದಿಯಾದ ವಿಭೀಷಣನಿಗೆ ಇದು ಸರಿಯಾಗಿ ತೋರುವುದಿಲ್ಲ. ಅದುದರಿಂದ ಅವನು ಬಹುನಮ್ರನಾಗಿ ಅಣ್ಣನನ್ನು ಕುರಿತು ಹೀಗೆ ಪ್ರಾರ್ಥಿಸುವನು :–

ಕ್ಷಮಸ್ವ ರೋಷಂ ತ್ಯಜ ರಾಕ್ಷಸೇಂದ್ರ
ಪ್ರಸೀದ ಮದ್ವಾಕ್ಯಮಿದಂ ಶೃಣುಷ್ವ
ವಧಂ ನ ಕುರ್ವಂತಿ ಪರಾವರಜ್ಞಾ
ದೂತಸ್ಯ ಸಂತೋ ವಸುಧಾಧಿಪೇಂದ್ರಾಃ ॥

"ವಿವೇಕಿಗಳೂ ಸಜ್ಜನರೂ ಆದ ರಾಜರು ದೂತನಾಗಿ ಬಂದವನನ್ನು ಕೊಲ್ಲುವುದಿಲ್ಲ. ಈ ಕಪಿಯನ್ನು ಕೊಲ್ಲುವುದು ರಾಜ್ಯಧರ್ಮಕ್ಕೆ ವಿರುದ್ಧವಾದುದು. ಲೋಕನಿಂದಿತ, ನಿನ್ನಂಥ ವೀರನಿಗೆ ಯೋಗ್ಯವಲ್ಲ. ನೀನು ಧರ್ಮಜ್ಞನೂ ರಾಜನೀತಿಶಾಸ್ತ್ರವಿಶಾರದನೂ ಆಗಿದ್ದೀಯೆ. ಸಮಸ್ತಪ್ರಾಣಿಗಳಲ್ಲಿಯೂ ನೀನೇ ವಿವೇಕಶಾಲಿಯೂ ಪರಮಾರ್ಥವನ್ನು ಬಲ್ಲವನೂ ಆಗಿದ್ದೀಯೆ. ನಿನ್ನಂತಹ ವಿದ್ವಾಂಸರೇ ಕೋಪಕ್ಕೆ ವಶರಾಗುವುದಾದರೆ ಶಾಸ್ತ್ರದಲ್ಲಿ ಪಾಂಡಿತ್ಯವನ್ನು ಗಳಿಸುವುದು ವ್ಯರ್ಥವೆಂದು ಹೇಳಬೇಕಾಗುತ್ತದೆ. ಆದುದರಿಂದ ಈ ದೂತನಿಗೆ ಯುಕ್ತವಾದ ದಂಡವನ್ನು ವಿಧಿಸು" ಎಂದನು. ಅದಕ್ಕೆ ರಾವಣನು ಮತ್ತೂ ಕೋಪಗೊಂಡು ಹೀಗೆಂದನು;

ನ ಪಾಪಾನಾಂ ವಧೇ ಪಾಪಂ
ವಿದ್ಯತೇ ಶತ್ರುಸೂದನ ।
ತಸ್ಮಾದೇನಂ ವಧಿಷ್ಯಾಮಿ
ವಾನರಂ ಪಾಪಚಾರಿಣಂ ॥

ಅಧರ್ಮ ಮೂಲವೂ ಬಹುದೋಷಯುಕ್ತವೂ ಅನಾರ್ಯಜುಷ್ಟವೂ ಆದ ಈ ಮಾತನ್ನು ಕೇಳಿ ಬುದ್ಧಿವಂತರಲ್ಲಿ ಶ್ರೇಷ್ಠನಾದ ವಿಭೀಷಣನು ಧರ್ಮಾರ್ಥಸಹಿತವಾದ ಈ ಮಾತನ್ನು ಹೇಳಿದನು.

ಪ್ರಸೀದ ಲಂಕೇಶ್ವರ ರಾಕ್ಷಸೇಂದ್ರ
ಧರ್ಮಾರ್ಥಯುಕ್ತಂ ವಚನಂ ಶೃಣುಷ್ವ ।
ದೂತಾನವಧ್ಯಾನ್ ಸಮಯೇಷು
ರಾಜನ್ ಸರ್ವೇಷು ಸರ್ವತ್ರ ವದಂತಿ ಸಂತಃ ॥

ಈತನು ಮಹಾಶತ್ರುವೆಂಬುದು ನಿಜ, ನಮಗೆ ಅಪಾರವಾದ ಕೇಡನ್ನೂ ಮಾಡಿದ್ದಾನೆ. ಆದರೂ ದೂತನನ್ನು ಕೊಲ್ಲಬಾರದೆಂದು ತಿಳಿದವರು ಹೇಳುತ್ತಾರೆ. ದೂತನನ್ನು ದಂಡಿಸುವುದಕ್ಕೆ ಅನೇಕ ಮಾರ್ಗಗಳುಂಟು. ಧರ್ಮಾರ್ಥಗಳಲ್ಲಿ ಪಳಗಿ ಅತ್ಯಂತ ವಿವೇಕಶಾಲಿಯಾದ ನಿನ್ನಂತಹವನೂ ಕೋಪಕ್ಕೆ ಅಧೀನನಾಗಬಹುದೇ ? ಧರ್ಮಶಾಸ್ತ್ರದಲ್ಲಾಗಲಿ ಲೋಕವ್ಯವಹಾರದಲ್ಲಾಗಲಿ ನಿನಗೆ ಸಮಾನರಾದವರೂ ಯಾರು ಇಲ್ಲ, ಹಿಂದೆ ಬುದ್ಧಿಯಿಲ್ಲದೆ ತಪ್ಪುಮಾಡಿದವರನೇಕರನ್ನೂ ಮನ್ನಿಸಿದ್ದೀಯೆ. ಈ ಕಪಿಯು ಬೇರೆಯವರ ಪ್ರೇರಣೆಯಿಂದ ಬಂದಿರುವವನು. ಇವನನ್ನು ಕೊಂದರೇನು ಪ್ರಯೋಜನ? ಈತನನ್ನು ಉಳಿಸಿ ಈತನನ್ನು ಕಳುಹಿಸಿದವನನ್ನು ದಂಡಿಸು. ನಿನ್ನ ಅಧೀನದಲ್ಲಿರುವ ಪರಾಕ್ರಮಶಾಲಿಗಳಾದ ಯೋಧರು ನೇರವಾಗಿ ಹೋಗಿ ರಾಮಲಕ್ಷ್ಮಣರನ್ನೂ ವಧಿಸಿ ಬರಲಿ– ಎಂದನು. ವಿಭೀಷಣನ ಈ ಮಾತುಗಳಿಂದ ರಾವಣನ ಕೋಪವು ಇಳಿಯಿತು. ಅವನ ಮಾತಿನಂತೆ ಆಂಜನೇಯನಿಗೆ ದೂತನಿಗೆ ಯೋಗ್ಯವಾದ ಅಂಶವೈರೂಪ್ಯ ಮಾಡುವ ಉದ್ದೇಶದಿಂದ ಅವನ ಬಾಲಕ್ಕೆ ಬೆಂಕಿಯನ್ನು ಹಚ್ಚಿಸುವ ಶಿಕ್ಷೆಯನ್ನು ವಿಧಿಸಿದನು. ಇದರಿಂದ ಲಂಕಾನಗರವೇ ದಗ್ಧವಾಯಿತು. ಆದರೂ ಇಲ್ಲಿ ನೋಡಬೇಕಾದುದು ವಿಭೀಷಣನ ವಿನಯ, ನ್ಯಾಯವಾದಿತ್ವ ಮತ್ತು ವಾಕ್ಚಾತುರ್ಯಗಳನ್ನು.

ಡಾ॥ ಎನ್. ಅನಂತರಂಗಾಚಾರ್

ಮುಂದೆ ವಿಭೀಷಣನನ್ನು ಕಾಣುವುದು ರಾವಣನ ಮಂತ್ರಾಲೋಚನಾಸಭೆಯಲ್ಲಿ. ಆ ವೇಳೆಗೆ ರಾಮನು ಕಪಿಸೈನ್ಯದೊಡನೆ ಸಮುದ್ರದ ದಕ್ಷಿಣ ತೀರದಲ್ಲಿ ಬೀಡುಬಿಟ್ಟಿದ್ದಾನೆ. ಅವನು ಸಮುದ್ರವನ್ನು ದಾಟಿ ಲಂಕಾಪಟ್ಟಣದ ಮೇಲೆ ಧಾಳಿಯಿಡುತ್ತಾನೆಂಬುದು ದೃಢವಾಗಿದೆ. ಆಗ ರಾವಣನು ತನ್ನ ಮಂತ್ರಿಮಂಡಲವನ್ನು ಕುರಿತು ತಾನು ಅಪಹರಿಸಿ ತಂದಿರುವ ಸೀತಾದೇವಿಯನ್ನು ಉಳಿಸಿಕೊಳ್ಳುವುದಕ್ಕೂ, ರಾಮಲಕ್ಷ್ಮಣರನ್ನು ಪರಿವಾರ ಸಮೇತ ನಾಶಮಾಡುವುದಕ್ಕೂ, ಮಾಡಬೇಕಾದ ಉಪಾಯವನ್ನು ತಿಳಿಸಹೇಳಿ ಪ್ರಾರ್ಥಿಸುತ್ತಾನೆ. ಆಗ ಅಲ್ಲಿದ್ದ ರಾಕ್ಷಸರು ರಾವಣನು ಅದುವರೆಗೆ ಸ್ವರ್ಗಮರ್ತ್ಯಪಾತಾಳಲೋಕಗಳಲ್ಲಿ ಮೆರೆದಿದ್ದ ಅದ್ಭುತವಾದ ಸಾಹಸಗಳನ್ನೂ, ಅವನ ಮಗನಾದ ಇಂದ್ರಜಿತುವು ಪ್ರದರ್ಶಿಸಿದ್ದ ಪರಾಕ್ರಮವೈಭವಗಳನ್ನೂ ಬಾಯಿತುಂಬ ಪ್ರಶಂಸಿಸಿ ರಾಮನನ್ನು ಸಂಹರಿಸುವುದರಲ್ಲಿ ಯಾವ ಸಂದೇಹವೂ ಇಲ್ಲವೆಂದು ಆಶ್ವಾಸನೆಯನ್ನೂ ನೀಡುವರು. ಪ್ರಹಸ್ತ ವಜ್ರದಂಷ್ಟ್ರ ವಜ್ರಹನುವೇ ಮೊದಲಾದವರು, ತಾವೊಬ್ಬೊಬ್ಬರೇ ರಾಮನನ್ನೂ ಸಂಹರಿಸಲು ಶಕ್ತರೆಂದು ಆರ್ಭಟಿಸುವರು.

ಆಗ ವಿಭೀಷಣನು ಆ ರಾಕ್ಷಸರನ್ನೆಲ್ಲ ಕುರಿತು ಸಂತೈಸುತ್ತ ಅವರಿಗೆ ಕೈಮುಗಿದುಕೊಂಡು ಹೀಗೆಂದು ಪ್ರಾರ್ಥಿಸಿದನು 'ಅಪ್ಪಾ ರಾಕ್ಷಸರೇ ಸಾಮಾನ್ಯವಾಗಿ ಮೊದಲು ಸಾಮ, ದಾನ, ಭೇದಗಳೆಂಬ ಮೂರು ಉಪಾಯಗಳನ್ನು ಪ್ರಯೋ

ಗಿಸಿ ನೋಡಿ, ಅವುಗಳಿಂದ ಕಾರ್ಯಸಿದ್ಧಿಯಾಗ ದಿದ್ದರೆ ಪರಾಕ್ರಮವನ್ನೂ ಪ್ರಯೋಗಿಸಬೇಕು. ರಾಮನ ಮೇಲೆ ಯಾವ ಪರಾಕ್ರಮವೂ ಪ್ರಯೋಜನವಾಗುವುದಿಲ್ಲ. ಹನುಮಂತನು ಮೆರೆದ ಸಾಹಸವನ್ನಾದರೂ ಮರೆಯಲಾದೀತೆ? ಅಲ್ಲದೆ ರಾಮನಿಂದ ನಮ್ಮ ರಾಜನಿಗಾದ ಅಪಕಾರವಾದರೂ ಏನು? ಖರನು ತಾನೇ ನಿಷ್ಕಾರಣವಾಗಿ ಉದ್ಧಟತನದಿಂದ ಮೇಲೆ ಬೀಳಲಾಗಿ ಅವನು ಸಾಯಬೇಕಾಯಿತು. ಯಾರಿಗಾದರೂ ಆತ್ಮಸಂರಕ್ಷಣೆ ಅವಶ್ಯಕಾರ್ಯವಲ್ಲವೇ ? ಪರಸ್ತ್ರೀಸ್ಪರ್ಶ ಪಾಪಕರ. ಆದರಿಂದ ವಿಪತ್ತು ಸ್ವತಃ ಸಿದ್ಧ. ಆದುದರಿಂದ ಸೀತೆಯನ್ನು ತಕ್ಷಣ ಹಿಂದಿರುಗಿಸಬೇಕು. ಹಾಗೆ ಮಾಡದಿದ್ದರೆ ರಾಮನ ಕ್ರೂರ ಬಾಣಗಳಿಂದ ಲಂಕಾನಗರವೇ ಪೂರ್ಣವಾಗಿ ನಾಶವಾಗುವುದು. ಅಣ್ಣಾ ! ಸೆರಗೊಡ್ಡಿ ಬೇಡುವೆನು. ನನ್ನ ಮಾತು ನಿನಗೆ ಹಿತವೂ ಪಥ್ಯವೂ ಆದುದು. ಕೋಪವೆಂಬುದು ಸೌಖ್ಯವನ್ನೂ ಧರ್ಮವನ್ನೂ ನಾಶಗೊಳಿಸುವುದು. ಧರ್ಮದಿಂದ ಸೌಖ್ಯವೂ ಕೀರ್ತಿಯೂ ಲಭಿಸುತ್ತದೆ. ಪ್ರಸನ್ನನಾಗು, ಮಕ್ಕಳು ಮರಿಗಳೊಡನೆ ಕೆಲವು ಕಾಲವಾದರೂ ಸುಖವಾಗಿ ಬಾಳೋಣ' ಎಂದು ಪ್ರಾರ್ಥಿಸಿದನು. ವಿಭೀಷಣನ ಮಾತು ರಾವಣನಿಗೆ ಹಿಡಿಸಲಿಲ್ಲ. ಆವನು ಯಾವ ಮಾತನ್ನೂ ಆಡದೆ ಸಚಿವ ಸಭೆಯನ್ನು ವಿಸರ್ಜಿಸಿ ಅಂತಃಪುರಕ್ಕೆ ತೆರಳಿದನು.

ವಿಭೀಷಣನಾದರೋ ಧರ್ಮಾರ್ಥಗಳ ಸ್ವರೂಪವನ್ನೂ ವಿಮರ್ಶಿಸಿ ನಿಶ್ಚಯ ಮಾಡಿಕೊಂಡನು. ಅಣ್ಣನ ಕ್ಷೇಮದಲ್ಲಿಯೇ ಮಗ್ನನಾದ ಆವನು ಮಾರನೆಯ ದಿನ ಅನಾಹೂತನಾಗಿ ಬಹುವೈಭವದಿಂದ ಜರುಗುತ್ತಿದ್ದ ರಾವಣನ ಆಪ್ತರಿಂದ ಪರಿವೃತವಾದ ಮಂತ್ರಾಲೋಚನಾ ಸಭೆಗೆ ತಾನೇ ಹೋದನು. ಬಹುನಮ್ರತೆಯಿಂದ ಸೂಕ್ತರೀತಿಯಲ್ಲಿ ರಾವಣನಿಗೆ ನಮಸ್ಕರಿಸಿ ಅವನ ಪ್ರಸನ್ನತೆಯನ್ನು ಸಂಪಾದಿಸಿ, ಸೀತಾದೇವಿಯನ್ನು ಅಪಹರಿಸಿ ತಂದ ದಿನದಿಂದ ನಗರದಲ್ಲಿ ಉಂಟಾದ ಅಪಶಕುನಗಳನ್ನೆಲ್ಲ ವಿವರವಾಗಿ ತಿಳಿಸಿ, ಅದರ ಫಲಗಳನ್ನೂ ತಿಳಿಸಲು ಎಲ್ಲ ಮಂತ್ರಿಗಳೂ ಹೆದರುತ್ತಿರುವರೆಂದೂ, ತಾನು ಅವನ್ನು ತಿಳಿದರೂ ನಿವೇದಿಸದಿರುವುದು ಧರ್ಮವಲ್ಲವೆಂದೂ, ಸೀತೆಯನ್ನೂ ರಾಮನಿಗೆ ಒಪ್ಪಿಸುವುದು ಆದ್ಯಕರ್ತವ್ಯವೆಂದೂ ವಿಜ್ಞಾಪಿಸಿಕೊಂಡನು.

ವಿಭೀಷಣನ ಮಾತು ಸಕಾರಣವಾಗಿದ್ದಿತು. ಭೂತಭವಿಷ್ಯದ್ವರ್ತಮಾನಗಳಿಗೆ ಅನ್ವಯಿಸುವಂತಿತ್ತು. ಅದನ್ನು ವಿಭೀಷಣನು ಮೃದುವಾಗಿಯೂ ವಿನಯದಿಂದಲೂ ನಿರೂಪಿಸಿದನು. ಆದರೂ ರಾವಣನಿಗೆ ಅದನ್ನು ಕೇಳಿ ಕೋಪವು ನೆತ್ತಿಗೇರಿತು. ಪ್ರಪಂಚದಲ್ಲಿಯೇ ತನ್ನನ್ನು ಗೆಲ್ಲುವರಿಲ್ಲವೆಂದೂ, ರಾಮನಿಗೆ ಸೀತೆಯು ಎಂದಿಗೂ ದಕ್ಕಲಾರಳೆಂದೂ ಹೇಳಿ ವಿಭೀಷಣನನ್ನು ಮನೆಗೆ ಕಳುಹಿಸಿದನು.

ರಾವಣನಿಗಾದರೋ ಚಿಂತೆಯು ಹೆಚ್ಚಿ ಕೃಶವಾಗತೊಡಗಿದನು. ಮಂತ್ರಾಲೋಚನೆಯ ಕಾಲ ಮಿಂಚಿತ್ತು. ಯುದ್ಧಕಾಲವು ಸನ್ನಿಹಿತವಾಗಿತ್ತು. ಆದರೂ ಕೊನೆಯ ಸಲ ಮಂತ್ರಾಲೋಚನೆಗೆ ಪ್ರಯತ್ನಿಸಿದನು. ಊರಿನಲ್ಲಿರುವವರಿಗೆಲ್ಲ ಹೇಳಿ ಕಳುಹಿಸಿದನು. ರಾವಣನು ಬಹುವೈಭವದಿಂದ ಸಭಾಪ್ರವೇಶಮಾಡಿದನು. ಎಲ್ಲರೂ ಆಗಮಿಸಿ ಸೂಕ್ತಸ್ಥಳದಲ್ಲಿ ಮಂಡಿಸಿದರು ವಿಭೀಷಣನೂ ಬಂದು ಬಹುನಮ್ರತೆಯಿಂದ ಅಣ್ಣನಿಗೆ ಶಾಸ್ತ್ರೋಕ್ತವಾಗಿ ನಮಸ್ಕರಿಸಿ ಅವನಿಂದ ನಿರ್ದೇಶಿತವಾದ ಯೋಗ್ಯಪೀಠದಲ್ಲಿ ಆಸೀನನಾದನು. ಸಭೆಯು ಬಹುಗಂಭೀರವಾಗಿತ್ತು.

ಆಗ ರಾವಣನು ಆ ಸಭೆಯನ್ನು ಕುರಿತು ಹೀಗೆಂದನು – “ ಎಲೈರಾಕ್ಷಸರೇ, ನಾನು ಸೀತೆಯನ್ನು ಅಪಹರಿಸಿ ತಂದಿದ್ದೇನೆ. ಆವಳು ಸರ್ವಾಂಗ ಸುಂದರಿ, ನಾನು ಅವಳಲ್ಲಿ ಕಾಮಪರವಶನಾಗಿದ್ದೇನೆ. ನಾನು ಅವಳನ್ನು ವಿವಿಧರೀತಿಯಲ್ಲಿ ಪ್ರಾರ್ಥಿಸಿದೆ. ಅವಳು ತನ್ನ ಗಂಡನನ್ನು ನಂಬಿಕೊಂಡು ನನ್ನಲ್ಲಿ ಮನಸ್ಸು ಮಾಡದಿದ್ದಾಳೆ. ವಿಶೇಷವಾದ ಒತ್ತಾಯದಿಂದ ಒಂದು ವರ್ಷದ ಆವಧಿಯನ್ನೂ ಕೇಳಿಕೊಂಡಿದ್ದಾಳೆ. ನಾನು ಅದಕ್ಕೆ ಒಪ್ಪಿದ್ದೇನೆ. ಆಕೆಯನ್ನು ರಾಮನಿಗೆ ಸರ್ವಥಾ ಒಪ್ಪಿಸಬಾರದು. ರಾಮಲಕ್ಷ್ಮಣರನ್ನೂ ಕೊಂದು ಹಾಕಬೇಕು. ನನ್ನ ಇಷ್ಟಾರ್ಥ ಪೂರ್ಣವಾಗಬೇಕು. ಇದಕ್ಕೆ ಸೂಕ್ತ ಉಪಾಯವನ್ನು ಸೂಚಿಸಿರಿ '' ಎಂದು ಕೇಳಿದನು.

ಆಗ ಸಭೆಯಲ್ಲಿದ್ದ ಕುಂಭಕರ್ಣನು ಸಿಡಿದೆದ್ದು ರಾವಣನು ಸಕಾಲದಲ್ಲಿ ಮಂತ್ರಾಲೋಚನೆ ಮಾಡದೆ ಸೀತಾದೇವಿಯನ್ನೂ ಅಪಹರಿಸಿ ತಂದುದು ಅವಿವೇಕವೆಂದೂ, ಆದರಿಂದ ಇಂತಹ ಪ್ರಮಾದವುಂಟಾಯಿತೆಂದೂ, ಈಗಲೂ ತನ್ನ ಪರಾಕ್ರಮವಿಶೇಷದಿಂದ ಮಿಂಚಿಹೋದ ಕಾರ್ಯವನ್ನೂ ಸರಿಪಡಿಸುವೆನೆಂದೂ, ರಾವಣನು ಸೀತೆಯೊಡನೆ ಸುಖವಾಗಿ ವಿಹರಿಸಬಹುದೆಂದೂ ಆಶ್ವಾಸನವಿತ್ತನು. ಇದರಿಂದ ರಾವಣನಿಗೆ ಸ್ವಲ್ಪ ಕೋಪಬಂದರೂ ಬಲಾತ್ಕಾರದಿಂದ ಸೀತೆಯನ್ನು ವಶಪಡಿಸಿಕೊಳ್ಳುವುದೇ ಸರಿಯೆಂದು ಸೂಚಿಸಿದ ಮಹಾಪಾರ್ಶ್ವನ ಸೂಚನೆಯಿಂದ ತೃಪ್ತನಾಗಿ, ಆವನಿಗೆ ತಾನು ಹಾಗೆ ಮಾಡಲು ಸಾಧ್ಯವಿಲ್ಲದ, ಪುಂಜಿಕಸ್ಥಲೆಯ ಸಂಬಂಧದಲ್ಲಿ ಪ್ರಾಪ್ತವಾದ ಬ್ರಹ್ಮಶಾಪದ ವೃತ್ತಾಂತವನ್ನು ತೋಡಿಕೊಂಡು

ತನ್ನ ಅನಸ್ಯಾದೃಶವಾದ ಶಕ್ತಿಯು ವಿಷಯವಾಗಿ ವಿಜೃಂಭಿಸಿದನು.

ಆಗ ವಿಭೀಷಣನು ಇದನ್ನು ಸಹಿಸಲಾರದೆ ರಾವಣನನ್ನು ಕುರಿತು 'ಅಣ್ಣಾ, ಸೀತೆಯೆಂಬ ಘಟಸರ್ಪವನ್ನೂ ತಂದು ಕತ್ತಿಗೆಗೆ ಸುತ್ತಿಕೊಂಡಿದ್ದೀಯೆ. ರಾಮನ ಶಕ್ತಿ ಅನನ್ಯಾದೃಶವಾದುದು. ಅವನ ಬಾಣಗಳಿಂದ ಲಂಕಾನಗರಿಯು ನಾಶವಾಗುವುದಕ್ಕೆ ಮುಂಚೆ 'ಪ್ರದೀಯತಾಂ ದಾಶರಥಾಯ ಮೈಥಿಲೀ'. ರಾಘವನು ರಣರಂಗದಲ್ಲಿ ನಿಂತರೆ ಕುಂಭಕರ್ಣನಾಗಲಿ ಇಂದ್ರಜಿತುವಾಗಲಿ ಅತಿಕಾಯನಾಗಲಿ ಅವನನ್ನು ಎದುರಿಸಲಾರರು. ರಾಮನನ್ನು ಪ್ರತಿಭಟಿಸಿದರೆ ನೀನೂ ಜೀವಂತವಾಗಿ ಉಳಿಯಲಾರೆ. ತ್ರಿಲೋಕದಲ್ಲಿ ಯಾರೂ ನಿನ್ನನ್ನು ರಕ್ಷಿಸಲಾರರು' ಎಂದ. ಇದನ್ನು ಕೇಳಿ ಪ್ರಹಸ್ತನು ಉದ್ವೇಗಗೊಂಡು ರಾಮನಿಂದ ತಮಗೆ ಯಾವ ಭಯವೂ ಇಲ್ಲವೆಂದು ಅರ್ಭಟಿಸಿದನು. ಆಗ ಧರ್ಮ ಶಾಸ್ತ್ರಗಳಲ್ಲಿ ಬಹು ನಿಪುಣನೂ, ಅಣ್ಣನ ಕ್ಷೇಮದಲ್ಲಿಯೇ ಸದಾಸಕ್ತನೂ, ಆದ ವಿಭೀಷಣನು ಪ್ರಹಸ್ತನನ್ನು ಕುರಿತು ಹೇಳಿದನು – "ಪ್ರಹಸ್ತ, ರಾವಣನಿಂದ ಹಿಡಿದು ಅವನ ಸೈನ್ಯದಲ್ಲಿರುವ ಯಾರೂ ರಾಮನನ್ನು ಪ್ರತಿಭಟಿಸಲಾರರು. ಆ ಕಾರ್ಯವು ನಿನ್ನಿಂದಾಗಲಿ ಇಂದ್ರಜಿತುವಿನಿಂದಾಗಲಿ ಸಾಧ್ಯವಿಲ್ಲ, ನೀವೆಲ್ಲರೂ ಸೇರಿ ರಾವಣನನ್ನು ರಕ್ಷಿಸುವುದು ಕರ್ತವ್ಯ. ಲಂಕಾನಗರಿಗೂ ಸಮಸ್ತ ರಾಕ್ಷಸವರ್ಗಕ್ಕೂ ಮಹಾರಾಜನಿಗೂ ಎಲ್ಲ ಬಂಧುಬಳಗಗಳಿಗೂ ಪಥ್ಯವಾದ ಮಾತನ್ನು ಹೇಳುತ್ತಿದ್ದೇನೆ. ಸೀತೆಯನ್ನು ರಾಮನಿಗೆ ಒಪ್ಪಿಸಿ ಬಿಡೋಣ. ಸರಿಯಾಗಿ ಆಲೋಚಿಸಿ ಮಹಾರಾಜನಿಗೆ ಹಿತವಾದ ಸಲಹೆಯನ್ನೂ ಕೊಡುವವರಾಗಿ" ಎಂದು ಬೇಡಿಕೊಂಡನು.

ಈ ಮಾತನ್ನು ಕೇಳಿ ಕೋಪೋದ್ರೇಕದಿಂದ ಉರಿದೆದ್ದ ಇಂದ್ರಜಿತುವು ವಿಭೀಷಣನನ್ನು ಕುಲಕ್ಕೆ ಕಳಂಕವನ್ನು ತಂದವನೆಂದೂ ಮೂರುಲೋಕಗಳಲ್ಲಿರುವ ಎಲ್ಲ ವೀರರನ್ನು ಬಹು ಸುಲಭವಾಗಿ ಪರಾಭವಿಸಿದ ತನಗೆ ಯಾರೂ ಇದಿರಿಲ್ಲವೆಂದೂ ಅಂತಹ ತನ್ನನ್ನು ನರಮಾತ್ರನಾದ ರಾಮನು ಹೇಗೆ ಸಾಧಿಸಬಲ್ಲನೆಂದೂ ಪ್ರಶ್ನೆ ಮಾಡಿದನು. ಅದನ್ನು ಸಹಿಸಲಾರದೆ ವಿಭೀಷಣನು ಇಂದ್ರಜಿತುವನ್ನು ಕುರಿತು "ಎಲಾ ಇಂದ್ರಜಿತು, ನೀನು ಇನ್ನೂ ಹುಡುಗ, ಅಪಕ್ವ ಬುದ್ಧಿಯಿಂದ ಆತ್ಮವಿನಾಶಕ್ಕೆ ಕಾರಣವಾದ ಮಾತುಗಳನ್ನಾಡುತ್ತಿದ್ದೀಯೆ, ನೀನು ನಿನ್ನ ತಂದೆಗೆ ಪುತ್ರರೂಪದ ಶತ್ರು, ನೀನು ಮೂಢ, ಅಪ್ರಗಲ್ಭ, ತೀಕ್ಷ್ಣ ಸ್ವಭಾವದವನು, ಅಲ್ಪಮತಿಯಾದನು, ಹುಡುಗಾಟದ ಮಾತನ್ನಾಡುತ್ತಿದ್ದೀಯೆ, ಯಮದಂಡಕ್ಕೆ ಸಮಾನವಾದ ರಾಮಬಾಣವನ್ನು ಯಾರು ಪ್ರತಿಭಟಿಸಲು ಸಾಧ್ಯ? ಸೂಕ್ತ ಕಾಣಿಕೆಗಳೊಡನೆ ಸೀತೆಯನ್ನು ರಾಮನಿಗೆ ಒಪ್ಪಿಸಿ ಸುಖವಾಗಿರೋಣ" ಎಂದನು.

ಈ ಮಾತುಗಳನ್ನು ಕೇಳಿ ರಾವಣನು ರೋಷಭೀಷಣನಾದನು. ವಿಭೀಷಣನನ್ನು ಕುರಿತು ಬೈಗುಳ ಸುರಿಮಳೆಯನ್ನೇ ಸುರಿಸಿದನು. "ನೀನು ಜ್ಞಾತಿ, ಮತ್ಸರ ನಿನ್ನಲ್ಲಿ ಸಹಜವಾದುದು, ನೀನು ಸ್ವಾರ್ಥಿ, ನೀನು ಕುಲಪಾತಕ, ನಿನ್ನಿಂದ ವಿಪತ್ತುಂಟಾಗುವುದೆಂದೂ ನನಗೆ ಚೆನ್ನಾಗಿ ಗೊತ್ತು, ಸ್ವಪಕ್ಷವನ್ನು ಬಿಟ್ಟು ಪರಪಕ್ಷವನ್ನು ಸೇರಿ ಬದುಕಬೇಕೆಂದಿದ್ದೀಯೆ. ಶತ್ರುಗಳು ಪರಪಕ್ಷವನ್ನು ನಾಶಮಾಡಿ ನಿನ್ನನ್ನು ನಿರ್ಮೂಲಗೊಳಿಸುತ್ತಾರೆ. ನೀನು ದುಷ್ಟ. ನಿನ್ನ ಸ್ನೇಹವು ಎಂದಿಗೂ ಸುಖಕರವಲ್ಲ, ಇನ್ನೊಬ್ಬರು ನಿನ್ನಂತೆ ಮಾತನಾಡಿದ್ದರೆ ಅವರು ಇಲ್ಲಿಯವರೆಗೆ ಜೀವದೊಂದಿಗೆ ಉಳಿಯುತ್ತಿರಲಿಲ್ಲ ಛೀ! ಕುಲಗೇಡಿ ನಿನಗೆ ಧಿಕ್ಕಾರ" ಎಂದನು.

ಈ ನಿಷ್ಠುರೋಕ್ತಿಯನ್ನು ನ್ಯಾಯವಾದಿಯಾದ ವಿಭೀಷಣನು ಕೇಳಿ ಸಹಿಸಲಾಗಲಿಲ್ಲ. ಅವನು ಗದಾಪಾಣಿಯಾಗಿ ಅಂತರಿಕ್ಷಕ್ಕೆ ನೆಗೆದನು. ಅವನ ನಾಲ್ವರು ಸಚಿವರೂ ಅವನನ್ನು ಅನುಸರಿಸಿದರು. ಅಂತರಿಕ್ಷದಲ್ಲಿಯೇ ನಿಂತು ವಿಭೀಷಣನು ರಾವಣನನ್ನು ಕುರಿತು ಹೀಗೆಂದನು "ಮಹಾರಾಜ, ಎಷ್ಟಾದರೂ ನೀನು ನನಗೆ ತಂದೆಯ ಸಮಾನ, ಆದರೆ ಧರ್ಮಮಾರ್ಗಾನುಯಾಯಿಯಾಗಿಲ್ಲ, ನಿನ್ನ ಹಿತಕ್ಕಾಗಿಯೇ ಚೆನ್ನಾಗಿ ವಿಚಾರಮಾಡಿ ನಿನಗೆ ಪಥ್ಯವಾದ ಮಾತುಗಳನ್ನಾಡಿದ್ದೇನೆ. ನನ್ನ ಮಾತುಗಳು ದುರುದ್ದೇಶಪೂರ್ಣವಾದುದೆಂದು ಭಾವಿಸಿದ್ದೀಯೆ. ಇದು ಸರಿಯಲ್ಲ ಈ ಕಠಿಣವಾದ ಅಪಾದನೆಯನ್ನು ನಾನು ಸಹಿಸಲಾರೆ.

ಸುಲಭಾಃ ಪುರುಷಾ ರಾಜನ್
ಸತತಂ ಪ್ರಿಯವಾದಿನಃ ।
ಅಪ್ರಿಯಸ್ಯ ಚ ಪಥ್ಯಸ್ಯ
ವಕ್ತಾ ಶ್ರೋತಾ ಚ ದುರ್ಲಭಃ ॥

ಕಾಲವಶರಾದವರಿಗೆ ಹಿತೋಕ್ತಿಗಳು ಹಿಡಿಸುವುದಿಲ್ಲ. ಮಹಾರಾಜ, ಯಾವಾಗಲೂ ಪ್ರಿಯವಾದ ಮಾತುಗಳನ್ನಾಡುವವರು ಸುಲಭವಾಗಿ ಸಿಕ್ಕುವರು. ಅಪ್ರಿಯವೂ ಪಥ್ಯವೂ ಆದ ಮಾತುಗಳನ್ನಾಡುವವರೂ ದುರ್ಲಭ, ಅದನ್ನು ಕೇಳುವವರೂ ದುರ್ಲಭ. ಕಾಲಪಾಶವು ನಿನ್ನ ಕೊರಳಿಗೆ ಸುತ್ತಿಕೊಂಡಿರುವುದನ್ನು ನೋಡಿ ಸುಮ್ಮನಿರಲಾಗಲಿಲ್ಲ. ರಾಮನ ನಿಶಿತಾಸ್ತ್ರಗಳಿಂದ ನೀನು ಹತನಾಗುವುದನ್ನು ನೋಡಲು ನನಗೆ ಇಷ್ಟವಾಗಲಿಲ್ಲ. ಆದುದರಿಂದ ನಿನ್ನ ಹಿತವನ್ನು ಬಯಸಿ ನಾನು ಆಡಿದ ಮಾತುಗಳಲ್ಲಿ ಅತಿರೇಕವಿದ್ದರೆ ಕ್ಷಮಿಸು. ನೀನು ನನಗೆ ಅಣ್ಣ, ಗುರು. ಒಪ್ಪಿನಲ್ಲಿ ನಿನ್ನ ಪ್ರಾಣವನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡು. ಈ ಲಂಕಾನಗರಿಯನ್ನೂ ರಾಕ್ಷಸರನ್ನು ಉಳಿಸಿಕೊ. ನಾನು ಹೋಗುವೆನು, ನಿನಗೆ ಶುಭವಾಗಲಿ" ಎಂದು ಹೇಳಿ ಅಲ್ಲಿಂದ ಹೊರಟು ಬಂದನು.

ಇದುವರೆಗೆ ದುರ್ಮಾರ್ಗಿಯಾದ ಅಣ್ಣನಾದ ರಾವಣನನ್ನು ಧರ್ಮಮಾರ್ಗಕ್ಕೆ ಯೋಜಿಸುವುದಕ್ಕೆ ಪ್ರಯತ್ನಪಟ್ಟಂತಾಯಿತು, ಅದು ಸಾಧ್ಯವಾಗಲಿಲ್ಲ. ಆದುದರಿಂದ ಧರ್ಮೋದ್ಧಾರಕನಾದ ರಾಮನನ್ನು ಆಶ್ರಯಿಸುವುದೇ ಸರಿಯಾದ ಮಾರ್ಗವೆಂದು ಭಾವಿಸಿ ಅದಕ್ಕಾಗಿ ನೇರವಾಗಿ ತನ್ನ ನಾಲ್ಕು ಮಂತ್ರಿಗಳೊಡನೆ ರಾಮನಿದ್ದ ಸಮುದ್ರದ ದಕ್ಷಿಣದ ದಡಕ್ಕೆ ಧಾವಿಸಿದನು.

ರಾಮಾಯಣದಲ್ಲಿ ವರ್ಣಿತವಾಗಿರುವ ವಿಭೀಷಣ ಶರಣಾಗತಿಯ ಭಾಗವು ಬಹುಪ್ರಸಿದ್ಧವಾಗಿದೆ. ಆಸ್ತಿಕರಿಂದ ಅಖಂಡ ರಾಮಾಯಣವೇ ಪ್ರಪತ್ತಿಮಾರ್ಗದರ್ಶಕಶಾಸ್ತ್ರಗ್ರಂಥವೆಂದು ಅಂಗೀಕೃತವಾಗಿದೆ. ಅದರಲ್ಲಿಯೂ ವಿಭೀಷಣ ಶರಣಾಗತಿಯು ಬಹುಮುಖ್ಯವಾಗಿದೆ. ಇಲ್ಲಿ ಶರಣಾಗತಿ ತತ್ತ್ವದ ಪರಿಕರಗಳಾದ ಆಕಿಂಚನ್ಯ, ಮಹಾವಿಶ್ವಾಸ ಮತ್ತು ಶರಣ್ಯನ ಔದಾರ್ಯಾದಿಗಳು ಬಹು ಹೃದಯಂಗಮವಾಗಿ ವರ್ಣಿತವಾಗಿವೆ-

ವಿಭೀಷಣನು ತನ್ನ ಅನುಚರರೊಂದಿಗೆ ರಾಮನ ಪಾಳೆಯವನ್ನು ಸೇರಿ

ಸರ್ವಲೋಕ ಶರಣ್ಯಾಯ
ರಾಘವಾಯ ಮಹಾತ್ಮನೇ ।
ನಿವೇದಯತ ಮಾಂ ಕ್ಷಿಪ್ರಂ
ವಿಭೀಷಣಮುಪಸ್ಥಿತಂ ॥

ಎಂದು ಅಂತರಿಕ್ಷದಿಂದಲೇ ತಿಳಿಯಪಡಿಸಿದನು. ವಿಭೀಷಣನನ್ನೂ ಅವನ ಸಂಗಾತಿಗಳನ್ನು ನೋಡಿದ ತಕ್ಷಣವೇ ಸುಗ್ರೀವಾದಿಗಳಿಗೆ ಭಯವುಂಟಾಯಿತು. ಅವನು ಶತ್ರುಪಕ್ಷದ ಗೂಢಚಾರನೆಂದು ಭಾವಿಸಿ ಅವನನ್ನು ಕೊಲ್ಲುವುದಕ್ಕೆ ಸಿದ್ಧವಾಗಿ ಆ ವಿಷಯವನ್ನು ರಾಮನಿಗೆ ತಿಳಿಯಪಡಿಸಿದರು. ಮಹಾಜ್ಞಾನಿಯೂ ದಯಾಮಯನೂ ಆದ ರಾಮನು ವಿಭೀಷಣನನ್ನು ಪರಿಗ್ರಹಿಸುವುದರಲ್ಲಿ ತನ್ನ ಅನುಯಾಯಿಗಳ ಅಭಿಪ್ರಾಯವನ್ನೂ ಕೇಳಿದನು. ಸುಗ್ರೀವ, ಅಂಗದ, ಜಾಂಬವಂತ, ಶರಭ, ಮೊದಲಾದವರು ತಮ್ಮ ಅಭಿಪ್ರಾಯಗಳನ್ನು ಸೂಚಿಸಿದರು. ಸುಗ್ರೀವನು 'ವಿಭೀಷಣನು ಪರಪಕ್ಷದ ಗೂಢಚಾರನಾದುದ

ರಿಂದ ಪರಿಗ್ರಾಹ್ಯನಲ್ಲ'ವೆಂದು ಖಡಾಖಂಡಿತವಾಗಿ ತಿಳಿಸಿದನು. ಪರೀಕ್ಷಿಸಿ ಯೋಗ್ಯನಾದರೆ ಅಂಗೀಕರಿಸುವುದು ಇಲ್ಲವಾದರೆ ತ್ಯಜಿಸುವುದು ಎಂಬುದು ಅಂಗದನ ಮತ. ದೂತರಿಂದ ಪರೀಕ್ಷಿಸಿ ಸೂಕ್ತ ಕಂಡು ಬಂದರೆ ಸ್ವೀಕರಿಸಬಹುದೆಂಬುದು ಜಾಂಬವಂತನ ಅಭಿಪ್ರಾಯ. ಪ್ರತ್ಯಕ್ಷವಾಗಿ ಅವನ ಚರ್ಯೆಯನ್ನು ಪರೀಕ್ಷಿಸಿ ಅವನನ್ನು ಸ್ವೀಕರಿಸಬೇಕೆಂಬುದು ಶರಭನ ಸೂಚನೆ. ಅಕಾಲ ದೇಶದಲ್ಲಿ ವಿಭೀಷಣನು ಬಂದಿರುವುದರಿಂದ ಅವನು ಪರಿಗ್ರಾಹ್ಯನಲ್ಲವೆಂಬುದು ನಮುಷ್ಟಿಯ ಒಮ್ಮತ. ಆಗ ಹನುಮಂತನು ಮಧ್ಯೆ ಪ್ರವೇಶಿಸಿ ಈಗ ಸೂಚಿತವಾಗಿರುವ ಯಾವ ಪರೀಕ್ಷೆಗಳಿಂದಲೂ ಪ್ರಯೋಜನವಿಲ್ಲವೆಂದೂ ದುರ್ಮಾರ್ಗಿಯಾದ ಅಣ್ಣನನ್ನು ಬಿಟ್ಟು, ಧರ್ಮೋದ್ಧಾರಕನಾದ ರಾಮನನ್ನು ಸೇರಿ ಆತ್ಮೋನ್ನತಿಯನ್ನು ಸಾಧಿಸಿಕೊಳ್ಳುವುದಕ್ಕಾಗಿಯೇ ವಿಭೀಷಣನು ಬಂದಿರುವುದರಿಂದ ಅವನು ಸರಿಯಾದ ಕಾಲದೇಶಗಳಲ್ಲಿಯೇ ಬಂದಿರುವವೆಂದೂ ಅವನು ಸರ್ವಥಾ ಪರಿಗ್ರಾಹ್ಯನೆಂದೂ ರಾಮನಿಗೆ ವಿಜ್ಞಾಪಿಸಿಕೊಂಡನು. ಸುಗ್ರೀವನು ಮಾತ್ರ ವಿಭೀಷಣನಿಂದ ತಮ್ಮ ಪಕ್ಷಕ್ಕೆ ಹಾನಿಯುಂಟಾಗುವ ಸಂಭವವಿರುವುದರಿಂದ ಅವನನ್ನು ಸ್ವೀಕರಿಸುವುದು ಸೂಕ್ತವಲ್ಲವೆಂದು ಹಟಹಿಡಿದನು. ಸುಗ್ರೀವನು ಮಾತುಗಳನ್ನು ಕೇಳಿ ರಾಮನು ಅವನಿಗೆ ಹೀಗೆಂದು ಉತ್ತರವಿತ್ತನು.

"ಸುಗ್ರೀವ, ಈ ರಾಕ್ಷಸನು ದುಷ್ಟನಾಗಿರಲಿ ಒಳ್ಳೆಯವನಾಗಿರಲಿ ಅದರಿಂದ ನನಗೆ ಆಗತಕ್ಕದ್ದೇನು ? ನನಗೆ ಎಳ್ಳಷ್ಟು ಕೇಡನ್ನು ಮಾಡಲೂ ಇವನಿಗೆ ಸಾಧ್ಯವಿಲ್ಲ. ನಾನು ಮನಸ್ಸುಮಾಡಿದರೆ ಈ ಲೋಕದಲ್ಲಿರುವ ಎಲ್ಲರನ್ನು ನನ್ನ ಕಿರುಬೆರಳಿನ ತುದಿಯಿಂದ ಕೊಂದುಹಾಕಬಲ್ಲೆ, ಯಾವನಾದರೊಬ್ಬನು ಶರಣಾರ್ಥಿಯಾಗಿ ದೈನ್ಯದಿಂದ ಕೈಮುಗಿದು ಬೇಡಿಕೊಳ್ಳುತ್ತಿದ್ದರೆ ಅವನನ್ನು ಎಂದಿಗೂ ಹಿಂಸಿಸಕೂಡದು. ಅವನು ಶತ್ರುವಾಗಿದ್ದರೂ ಕೊಲ್ಲಬಾರದು. ಶತ್ರುಪಕ್ಷದವಲ್ಲಿ ಯಾವನೇ ಆಗಲಿ ಅವನು ಆರ್ತನಾಗಲಿ ಉದ್ಧತನಾಗಲೀ ಶರಣಾಗತನನ್ನು ರಕ್ಷಿಸಬೇಕು. ತನ್ನ ಪ್ರಾಣವು ಹೋದರೂ ಚಿಂತೆಯಿಲ್ಲ, ಸಂಸ್ಕೃತಿ ಜ್ಞಾನದವನನ್ನು ಕಾಪಾಡಬೇಕು. ಭಯಲೋಭಗಳಿಂದಾಗಲೀ ಅವಿವೇಕದಿಂದಾಗಲಿ ಅವನನ್ನು ರಕ್ಷಿಸದಿದ್ದರೆ ಮಹಾಪಾತಕವುಂಟಾಗುತ್ತದೆ, ಸದ್ಗತಿಗೆ ಭಂಗವುಂಟಾಗುತ್ತದೆ. ಅಪಕೀರ್ತಿಯೂ ಉಂಟಾಗುತ್ತದೆ.

ಸಕೃದೇವ ಪ್ರಪನ್ನಾಯ
ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ
ದದಾಮ್ಯೇತದ್ವ್ರತಂ ಮಮ ॥

ಒಂದೇ ಒಂದು ಸಲ ನನಗೆ ಶರಣಾಗತನಾಗಿ 'ನಾನು ನಿನ್ನವನು' ಎಂದು ಯಾಚಿಸಿದವನನ್ನು ನಾನು ಅಭಯವನ್ನಿತ್ತು ರಕ್ಷಿಸುವೆನು. ಜೀವರಾಶಿಗಳಲ್ಲಿ ಯಾರೇ ಆಗಲಿ ಸಕಲ ಭೂತಗಳಿಂದ ಅವನಿಗೆ ಕಷ್ಟಬರದಂತೆ ಅವನ ಯೋಗಕ್ಷೇಮವನ್ನೂ ನಾನು ನೋಡಿಕೊಳ್ಳುತ್ತೇನೆ. ಇದು ನನ್ನವ್ರತ.

ಆನಯೈನಂ ಹರಿಶ್ರೇಷ್ಠ
ದತ್ತಮಸ್ಯಾಭಯಂ ಮಮ ।
ವಿಭೀಷಣೋ ವಾ ಸುಗ್ರೀವ
ಯದಿ ವಾ ರಾವಣಃ ಸ್ವಯಂ ॥

ಸುಗ್ರೀವ ವಿಭೀಷಣನನ್ನು ಕರೆದು ಕೊಂಡುಬಾ ಅವನಿಗೆ ಅಭಯವನ್ನಿತ್ತಿದ್ದೇನೆ. ಬಂದವನು ವಿಭೀಷಣನಾಗಿರಲಿ, ಒಂದು ವೇಳೆ ಸಾಕ್ಷಾತ್ ರಾವಣನೇ ಆಗಿರಲಿ ಅವನಿಗೂ ಅಭಯವುಂಟು" ಎಂದು ಹೇಳಿದನು.

ರಾಮನ ಮಾತಿನಿಂದ ಎಲ್ಲರಿಗೂ ಆಶ್ಚರ್ಯವೂ ಸಂತೋಷವೂ ಆಯಿತು. ವಿಭೀಷಣ ಸಂಗ್ರಹ ಕಾರ್ಯ ಎಲ್ಲರಿಗೂ ಮೆಚ್ಚಿಗೆಯಾಯಿತು. ವಾನರರು ವಿಭೀಷಣನನ್ನು ಅವನ ಮಂತ್ರಿಗಳನ್ನೂ ಕರೆದು ತಂದರು. ವಿಭೀಷಣನು ರಾಮನಿಗೆ ವಂದಿಸಿ ಹೀಗೆಂದನು "ಶ್ರೀರಾಮ, ನಾನು ರಾವಣನ ತಮ್ಮ, ಅವನಿಂದ ಅವಮಾನಿತನಾಗಿದ್ದೇನೆ. ಆದುದರಿಂದ ಸರ್ವಭೂತಗಳಿಗೂ ಶರಣ್ಯನಾದ ನಿನಗೆ ಶರಣಾಗತನಾಗಿದ್ದೇನೆ. ಲಂಕೆಯನ್ನು ತೊರೆದು ಬಂದಿದ್ದೇನೆ. ಮಿತ್ರರನ್ನೂ ಸಕಲ ಸಂಪತ್ತುಗಳನ್ನು ತೊರೆದು ಬಂದು ನಿನಗೆ ಶರಣಾಗತನಾಗಿದ್ದೇನೆ. ನನ್ನ ರಾಜ್ಯ, ನನ್ನ ಸೌಖ್ಯ, ನನ್ನ ಜೀವಿತ–ಎಲ್ಲವೂ ನಿನಗೆ ಸೇರಿದ್ದು''ಎಂದು ವಿಜ್ಞಾಪಿಸಿದನು. ರಾಮನು ಈ ಮಾತುಗಳಿಂದ ತೃಪ್ತನಾಗಿ ಕೃಪಾದೃಷ್ಟಿಯಿಂದ ಅವನನ್ನು ನೋಡಿ ಅವನಿಂದ ಶತ್ರುಪಕ್ಷದ ಬಲಾಬಲಗಳನ್ನು ತಿಳಿದುಕೊಂಡನು. ವಿಭೀಷಣನಿಗೆ ಲಂಕಾಧಿಪತ್ಯವನ್ನು ಕೊಡಿಸುವ ಆಶ್ವಾಸನೆಯನ್ನಿತ್ತನು. ಆ ವಿಷಯದಲ್ಲಿ ತನ್ನ ತಮ್ಮಂದಿರ ಮೇಲೆ ಆಣೆಯಿಟ್ಟು ದೃಢೀಕರಿಸಿದನು. ವಿಭೀಷಣನು ರಾಮನಿಗೆ ತನ್ನ ಕೈಲಾದ ಸಹಾಯನ್ನೆಲ್ಲ ಮಾಡುವೆನೆಂದು ಭರವಸೆಯಿತ್ತನು. ರಾಮನು ವಿಭೀಷಣನಿಗೆ ಲಕ್ಷ್ಮಣನಿಂದ ಲಂಕಾರಾಜ್ಯಾಭಿಷೇಕವನ್ನು ಮಾಡಿಸಿದನು. ವಿಭೀಷಣನು ರಾಮನ ಕ್ಷೇಮಲಾಭಗಳಲ್ಲಿ ಪಾಲುದಾರನಾಗಿ ತನ್ನ ಅಮಾತ್ಯರ ಮೂಲಕ ಪ್ರತಿಪಕ್ಷದವರ ಕಾರ್ಯಭಾರಗಳ ವಿವರವನ್ನು ತಿಳಿಸುತ್ತಿದ್ದನು. ಯುದ್ಧದಲ್ಲಿ ಸೂಕ್ತಭಾಗವಹಿಸಿ ಸಹಾಯಮಾಡಿದನು. ರಾಮಲಕ್ಷ್ಮಣರು ನಾಗಪಾಶದಿಂದ ಬಂಧಿತರಾದಾಗ ಅವನಿಗಾದ ಆತಂಕ ಅಷ್ಟಿಷ್ಟಲ್ಲ. ಅವರನ್ನು ಜೀವಂತರನ್ನಾಗಿ ಮಾಡಲು ವಿಶೇಷ ಹೆಣಗಾಡಿದನು. ಮಾಯಾ ಸೀತಾವಧೆಯಿಂದ ಕ್ಷೋಭಿತನಾಗಿದ್ದ ರಾಮನನ್ನು ಸಂತೈಸಿ ಇಂದ್ರಜಿತುವಿನಿಂದ ಪ್ರಾರಂಭವಾಗಿದ್ದ ನಿಕುಂಭಿಲಾಯಾಗಕ್ಕೆ ಅಡ್ಡಿಮಾಡಲು ಲಕ್ಷ್ಮಣನ ಜೊತೆಯಲ್ಲಿ ಹೋಗಿ ಇಂದ್ರಜಿತುವಿನ ವಧೆಗೆ ಬಹುಮಟ್ಟಿಗೆ ಸಹಾಯ ಮಾಡಿದನು. ಕುಂಭಕರ್ಣನೊಡನೆ ಯುದ್ಧಮಾಡಬೇಕಾದ ಸಂದರ್ಭದಲ್ಲಿ ಅವನ ಸೂಚನೆಯಂತೆಯೇ ಮರೆಯಾಗಿ ತನ್ನ ವಂಶೋದ್ಧಾರಕ್ಕೆ ಸಹಾಯಮಾಡಿದನು. ಕೊನೆಯಲ್ಲಿ ರಾಮನ ಸೂಚನೆಯಂತೆಯೇ ಸೀತಾದೇವಿಯನ್ನು ಸ್ನಾನಮಾಡಿಸಿ ಆಭರಣಾದಿಗಳಿಂದಲಂಕರಿಸಿ ರಾಮನಲ್ಲಿಗೆ ಕರೆದುತಂದನು. ರಾಮನಿಂದ ತಿರಸ್ಕೃತಳಾದ ಸೀತೆಯ ಸ್ಥಿತಿಯನ್ನು ಕಂಡು ಮರುಗಿದನು. ಪರಿಶುದ್ಧಳೆಂದು ಅವಳನ್ನು ರಾಮನು ಅಂಗೀಕರಿಸಿದಾಗ ವಿಶೇಷ ಸಂತೋಷಿಸಿದನು. ಯುದ್ಧವೆಲ್ಲ ಮುಗಿದಮೇಲೆ ರಾಮನನ್ನು ಒಂದು ದಿನದ ಆತಿಥ್ಯವನ್ನಾದರೂ ಸ್ವೀಕರಿಸಲು ಪ್ರಾರ್ಥಿಸಿದನು. ತನ್ನ ಪಟ್ಟಾಭಿಷೇಕ ಕಾಲದಲ್ಲಿ ತನ್ನ ಸಾಮಂತರೂ ಪರಿಜನರೂ ತನಗೆ ತಂದೊಪ್ಪಿಸಿದ ಎಲ್ಲ ಕಪ್ಪಕಾಣಿಕೆಗಳನ್ನು ರಾಮನಿಗೆ ಒಪ್ಪಿಸಿದನು. ರಾಮನು ಅಯೋಧ್ಯಾಪುರಕ್ಕೆ ಹಿಂದಿರುಗಲು ತನ್ನಲ್ಲಿದ್ದ ಪುಷ್ಪಕವಿಮಾನವನ್ನು ಅತನಿಗಾಗಿ ಸಿದ್ಧಪಡಿಸಿ ಅದರಲ್ಲಿ ರಾಮನೊಡನೆ ತಾನೂ ಅಯೋಧ್ಯೆಗೆ ತೆರಳಿ ರಾಮನ ಪಟ್ಟಾಭಿಷೇಕ ಸಮಯದಲ್ಲಿ ಅವನ ಪರಿವಾರವರ್ಗದಲ್ಲಿ ಒಬ್ಬನಾದನು. ಆದರಿಂದ ಸಂತುಷ್ಟನಾದ ರಾಮನು ತನ್ನ ಕುಲಧನವಾದ ರಂಗನಾಥನನ್ನು ವಿಭೀಷಣನಿಗೆ ಅನುಗ್ರಹಿಸಿದನು. ಅದರೊಂದಿಗೆ ಅವನು ಲಂಕೆಯನ್ನು ಸೇರಿ ಶತ್ರುಬಾಧೆಯಿಲ್ಲದೆ ಅನೇಕಕಾಲ ರಾಜ್ಯಭಾರ ಮಾಡಿದನು.

ವಿಭೀಷಣನು ಧರ್ಮನನ್ನು ಕಾಪಾಡಿದನು, ಧರ್ಮವು ಅವನನ್ನು ಕಾಪಾಡಿತು. "ಧರ್ಮೋ ರಕ್ಷತಿ ರಕ್ಷಿತಃ ". " ವಿಭೀಷಣೋಪಿ ಧರ್ಮಾತ್ಮಾ ನತು ರಾಕ್ಷಸ ಚೇಷ್ಟಿತಃ '' ★

---

# ನೇಗಿಲ ಹಬ್ಬ ಉಗಾದಿ



ವಸಂತಮಾಸದ ಆಗಮನವನ್ನು ಮರಗಿಡಗಳು ಚಿಗುರಿ ಕೆಂಪಾದ ಬಾವುಟದಂತೆ ಕಂಗೊಳಿಸಿ ಸ್ವಾಗತಿಸುತ್ತವೆ. ವಸಂತ ಋತುವು ಋತುಗಳ ರಾಜ. ವಸಂತಮಾಸದ ಆದಿಕಾಲವೇ ಯುಗಾದಿ. ವರ್ಷದ ಆದಿಗೇ ಯುಗಾದಿ ಎನ್ನುವರು. ಜೀವನದಲ್ಲಿ ಆಗುವ ಸುಖ ದುಃಖಗಳನ್ನು ಸಮಾನರೀತಿಯಲ್ಲಿ ಕಾಣಲು ಬೇವು ಬೆಲ್ಲವನ್ನು ತಿನ್ನುವ ವಾಡಿಕೆ. ಕಷ್ಟ ಸುಖಗಳು ಭಗವಂತನ ವರಪ್ರಸಾದವೆಂದು ತಿಳಿದು ಈ ಹಬ್ಬವನ್ನು ಭಾರತದಲ್ಲಿ ಎಲ್ಲಾ ಜನರು ಜಾತಿಮತ ಭೇದವಿಲ್ಲದೆ ಆಚರಿಸುತ್ತಾರೆ. ಯುಗಾದಿಯು ಮಾನವ ಜೀವನದಲ್ಲಿ ಸಂತೋಷ ಹಾಗೂ ಹೊಸ ಚೇತನವನ್ನು ಮೂಡಿಸುವ ಹಬ್ಬವಾಗಿದೆ. ಹಬ್ಬಗಳ ಹಬ್ಬವೇ ಯುಗಾದಿ. ಹಳ್ಳಿ ಪಟ್ಟಣಗಳೆನ್ನದೆ ಬಡವ, ಶ್ರೀಮಂತರೆನ್ನದೆ ಮನೆಮನೆಯಲ್ಲಿಯೂ ಹರ್ಷದ ಹೊಳೆಯನ್ನು ಹರಿಸಿ ಸುಖ ದುಃಖಗಳನ್ನು ಸಮಾನರೀತಿಯಲ್ಲಿ ಅನುಭವಿಸಬೇಕೆಂದು ಸಾರಿಹೇಳುವಂತಹ ಹಬ್ಬವಾಗಿದೆ.

ಉತ್ತರಾಯಣ, ದಕ್ಷಿಣಾಯನ ಎಂಬ ಎರಡು ಆಯನಗಳನ್ನು ಹೊಂದಿರುವ ವರ್ಷದ ಆದಿಗೆ ಯುಗಾದಿ ಎಂಬ ಅರ್ಥ ಸೂಕ್ತವಾದುದು ಎಂದು ಬಲ್ಲವರು ಹೇಳುವ ಮಾತಾಗಿದೆ. ಸೂರ್ಯನು ಚೈತ್ರ ಶುದ್ಧ ಪಾಡ್ಯಮಿಯ ದಿನ ಭೂಮಧ್ಯರೇಖೆಯ ಮೇಲೆ ಇರುತ್ತಾನೆ. ಆದ್ದರಿಂದ ಆ ದಿನವೇ ಯುಗಾದಿ ಎಂದೂ ಹೇಳುತ್ತಾರೆ. ಸುಪ್ರಸಿದ್ಧ ಜ್ಯೋತಿಷಿ ಭಾಸ್ಕರಾಚಾರ್ಯನು ಯುಗಾದಿಯ ಬಗ್ಗೆ "ಯುಗಾದಿಕಾನಾಯ ಯುಗ ಪತ್ರ ವೃತ್ತಿ" ಎಂದೂ ಹೇಳಿದ್ದಾನೆ. ಹಿಂದೂ ಜ್ಯೋತಿಷ್ಯ, ಧರ್ಮಶಾಸ್ತ್ರದ ಪ್ರಕಾರ ಚೈತ್ರ ಶುದ್ಧ ಪಾಡ್ಯಮಿಯನ್ನು ಭಾರತದಾದ್ಯಂತ ಹೊಸವರ್ಷದ ಆದಿಯಾಗಿ ಎಲ್ಲರೂ ಆಚರಿಸುತ್ತಾರೆ. ಅಲ್ಲದೆ ಈ ದಿನ ಅಭ್ಯಂಜನ ಮಾಡಿಕೊಂಡು ನೂತನ ವಸ್ತ್ರ ಧಾರಣೆ ಮಾಡುತ್ತಾರೆ.

ಯುಗಾದಿಯನ್ನು ಆಚರಿಸುವವರಲ್ಲಿ ನಾವು ಎರಡು ಪ್ರಭೇದಗಳನ್ನು ಕಾಣುತ್ತೇವೆ ಒಂದು ಸೌರಮಾನ ಇನ್ನೊಂದು ಚಾಂದ್ರಮಾನ. ಸೂರ್ಯನ ಚಲನವಲನದ ಕಾಲಚಕ್ರದ ಸ್ಥಿತಿಗತಿಯನ್ನು ಗುರುತಿಸಿ ಅದಕ್ಕೆ ಸರಿಯಾಗಿ ತಿಥಿ, ನಕ್ಷತ್ರ ಮುಹೂರ್ತಾದಿಗಳನ್ನು ನಿಶ್ಚಯಿಸುವವರು ಸೌರಮಾನ ರೀತಿ ಯುಗಾದಿಯನ್ನು ಆಚರಿಸುವರು. ಚಂದ್ರನ ಪರಿಭ್ರಮಣದ ಕಾಲದ ಸ್ಥಿತಿಗತಿಯನ್ನು ಗಮನಿಸಿ ತಿಥಿ ನಕ್ಷತ್ರಾದಿಗಳನ್ನು ಋತುಮಾಸದ ಘಳಿಗೆಗಳೆಲ್ಲವನ್ನು ನಿರ್ಧರಿಸಿಕೊಳ್ಳುವವರು ಚಾಂದ್ರಮಾನ ರೀತಿ ಯುಗಾದಿಯನ್ನಾಚರಿಸುವರು.

ಭಾರತದ ಪ್ರಾಚೀನ ಸಂಸ್ಕೃತಿ, ಧರ್ಮದ ಪ್ರಕಾರ ಬೆಳಗ್ಗೆ ಎದ್ದೊಡನೆಯೇ ಅಂಗೈನೋಡಿ, ತಿಕ್ಕಿ ಕಣ್ಣಿಗೊರಸಿಕೊಂಡು ದೇವರಿಗೂ, ಹಿರಿಯರಿಗೂ ವಂದಿಸಿ ಶುಭ ಆಶೀರ್ವಾದವನ್ನು ಬೇಡುವುದು ರೂಢಿ. ಯುಗಾದಿಹಬ್ಬದಂದು ಮುತ್ತೈದೆಯರು ಉಷಃಕಾಲದಲ್ಲಿ ಎದ್ದು ಸ್ನಾನ ಮಾಡಿ ಪರಿಶುಭ್ರರಾಗಿ ಬೆಳ್ಳಿಯ ಅಥವಾ ಹಿತ್ತಾಳೆಯ ಹರಿವಾಣದಲ್ಲಿ ಜೋಡು ತೆಂಗಿನಕಾಯಿ ಇಟ್ಟು ಅದರ ಮುಂದೆ ಹೊಸ ಹೊಸ ಫಲಗಳನ್ನು ಇಟ್ಟು ದೇವರ ಮುಂಭಾಗದಲ್ಲಿ ಬಗೆಬಗೆಯ ಪುಷ್ಪಗಳಿಂದ ಅಲಂಕರಿಸಿ ಕನ್ನಡಿಯನ್ನಿಡುತ್ತಾರೆ. ಹಿರಿಯರೆಲ್ಲರೂ ಕನ್ನಡಿಯಲ್ಲಿ ಮುಖನೋಡಿ ಆದಮೇಲೆ ತಾನೂ ನೋಡಿ ತಮ್ಮ ತಮ್ಮ ಮಕ್ಕಳನ್ನು ಎಬ್ಬಿಸಿ ಕನ್ನಡಿಯಲ್ಲಿ ಮುಖನೋಡಿ ಬರುವಂತೆ ಸೂಚಿಸುತ್ತಾರೆ. ಇದನ್ನು ನಾವು ಕಣಿನೋಡುವುದೆಂದೂ ಕರೆಯುತ್ತೇವೆ. ಕಣಿ ನೋಡುವುದೆಂದರೆ ಭವಿಷ್ಯ ನಿರ್ಣಯಿಸುವುದೆಂದೂ ಹೇಳಬಹುದು. ಅಥವಾ ಈ ಶುಭ ದಿನದಂದು ಕನ್ನಡಿಯಲ್ಲಿ ಮುಖನೋಡಿದರೆ ವರ್ಚಸ್ಸು, ಚೈತನ್ಯ, ಹೊಸಹುರುಪು ಮೂಡಿ ಬರುವುದೆಂದು

ಚೈತ್ರಮಾಸೇ ಜಗದ್ಬ್ರಹ್ಮಾ ಸಸರ್ಜ ಪ್ರಥಮೇ ಹನಿ
ಶುಕ್ಲ ಪಕ್ಷೇ ಸಮಗ್ರಂತು ತಥಾ ಸೂರ್ಯೋದಯೇ ಸತಿ |
ಪ್ರವರ್ತಯಾ ಮಾಸ ತಥಾ ಕಾಲಸ್ಯ ಗಣನಾಮಪಿ
ಗ್ರಹಾನ್ನಾಗಾನೃತೂನ್ಮಾಸಾನ್ವತ್ಸರಾಧಿಪಾನ್ ||

– ಚೈತ್ರ ಮಾಸದ ಶುಕ್ಲಪಕ್ಷದ ಪ್ರಥಮ ದಿನದಂದು ಬ್ರಹ್ಮನು ಜಗತ್ತನ್ನು ಸಮಗ್ರವಾಗಿ ಸೃಜಿಸಿದನು. ಅಂದಿನಿಂದಲೇ ಕಾಲಗಣನೆ ಆರಂಭವಾಗುವಂತೆ ಗ್ರಹ, ನಕ್ಷತ್ರ, ಋತು, ಮಾಸ, ವರ್ಷಾಧಿಪತಿಗಳನ್ನೂ ಸೃಷ್ಟಿಸಿದನು.

**ಶ್ರೀ ಗಣಪತಿಭಟ್ಟ ಆರ್ತಿಕಜೆ**

ಧಾರ್ಮಿಕ ನಂಬಿಕೆಯಿದೆ. ಯಾವ ಅಮಂಗಳವೂ ಭವಿಷ್ಯದಲ್ಲಿ ಬಾರದೇ ಇರುವುದೇ ಕಣಿ ನೋಡುವಲ್ಲಿನ ಮೂಲತತ್ತ್ವ. ಅಲ್ಲದೆ ಮುಂದಿನ ಭವಿಷ್ಯದಲ್ಲಿ ಫಲಾದಿಗಳು ಸಮೃದ್ಧಿಯಾಗಿ ಬೆಳೆಯಲೆಂದೇ ನಾನಾಫಲಾದಿ ವಸ್ತುಗಳನ್ನು ದೇವರ ಮುಂದಿಡುತ್ತೇವೆ

ಬೇವು ಬೆಲ್ಲಗಳ ಸವಿಗೆ, ಸುಖದುಃಖಗಳ ಸಮಾನತೆಗೆ ಯುಗಾದಿ ಆಚರಣೆಯು ಬೋಧನೆಯಾಗಿದೆ. ಕಷ್ಟಬಂದಾಗ ಮಾನವನು ಒಂದಿಷ್ಟೂ ವಿಚಲಿತನಾಗದೆ ಧೈರ್ಯದಿಂದ ಅದನ್ನು ಎದುರಿಸುವಂತಾಗಲಿ ಸುಖ ಬಂದಾಗ ಹಿಗ್ಗದೆ ಕುಗ್ಗದೆ ಸಮಾನಪ್ರೀತಿಯಿಂದ ಇವೆರಡನ್ನು ಕಾಣುವಂತೆ ಇರಲಿ ಮತ್ತು ಜೀವನದ ಭವಿಷ್ಯವನ್ನು ಉತ್ತಮ ಮಾರ್ಗದರ್ಶನದ ಕಡೆಗೆ ಕೊಂಡೊಯ್ಯುವಂತಾಗಲಿ ಎಂಬುದರ ಸಂಕೇತವಾಗಿ ಬೇವು ಬೆಲ್ಲ ತಿನ್ನುವ ಪದ್ಧತಿಯಾಗಿದೆ.

ನೇಗಿಲು ರೈತನ ಜೀವನದ ಬೆನ್ನೆಲುಬು. ಭೂಮಾತೆಯು ಒಡಲಲ್ಲಿ ದವಸಧಾನ್ಯಗಳನ್ನು ಬೆಳೆಯಬೇಕಾದರೆ ಅವನಿಗೆ ಈ ನೇಗಿಲಿನ ಅವಶ್ಯಕತೆ ಇದೆ. ಇದರಿಂದ ಚೆನ್ನಾಗಿ ಬೆಳೆ ಬೆಳೆದರೆ ರೈತನು ಸುಖದಲ್ಲೂ, ಬೆಳೆ ತನ್ನ ಶ್ರಮಕ್ಕೆ ಸರಿಯಾಗಿ ಬಾರದಿದ್ದಲ್ಲಿ ದುಃಖದಲ್ಲೂ ಇರುವ ಪರಿಸ್ಥಿತಿ ಒದಗುತ್ತದೆ. ಇದಕ್ಕಾಗಿ ರೈತನು ತನ್ನ ಜೀವನದ ಭವಿಷ್ಯದಲ್ಲಿ ಸಂತೋಷಗಳೇ ಮೂಡಿಬರಲೆಂದು ಮಹದಾಸೆಯಿಂದ ತನ್ನ ಆಯುಧಕ್ಕೆ ಭಕ್ತಿ ಶ್ರದ್ಧೆಯಿಂದ ಯುಗಾದಿಯ ದಿನ ವಿಶೇಷ ಪೂಜೆಯನ್ನು ಸಲ್ಲಿಸುತ್ತಾನೆ. ರೈತನು ಉಷಃಕಾಲದಲ್ಲಿ ಪರಿವಾರ ಸಮೇತನಾಗಿ ಎದ್ದು ಸ್ನಾನ ಮಾಡಿಕೊಂಡು ಮಾವಿನ ಎಲೆ ಮತ್ತು ಬೇವಿನ ಎಲೆಗಳಿಂದ ನೇಗಿಲನ್ನು ಅಲಂಕರಿಸುತ್ತಾನೆ. ದೇವರ ಕೋಣೆಯಲ್ಲಿ ಎರಡು ಗೂಟಗಳಿಗೆ ಹಲಗೆಯನ್ನಿಟ್ಟು ಕಟ್ಟಿ ತುಳಸಿ ಮಣ್ಣು, ಕೆಂಪುಮಣ್ಣು ಗೊಬ್ಬರ ಮಿಶ್ರಣವನ್ನು ತುಂಬಿಸಿ ಸುತ್ತಲೂ ಹೂಗಳಿಂದ ಅಲಂಕರಿಸುತ್ತಾನೆ. ನೇಗಿಲಿಗೆ ಅರಿಷಿಣ ಕುಂಕುಮ ಹಚ್ಚುತ್ತಾನೆ ಈ ವರ್ಷದ ಬಿತ್ತನೆಗೆ ಇಟ್ಟಿದ್ದ ದವಸ ಧಾನ್ಯಗಳನ್ನು ಹರಿವಾಣದಲ್ಲಿ ತುಂಬಿಸಿ ಅಲಂಕರಿಸಿದ ಹಲಗೆಯ ಸುತ್ತ ಇಡುತ್ತಾನೆ. ಅನಂತರ ಅರಿಷಿಣ ಕುಂಕುಮ, ಪುಷ್ಪ ಮೊದಲಾದವುಗಳಿಂದ ಪೂಜೆಮಾಡಿ ನೈವೇದ್ಯಮಾಡುತ್ತಾನೆ. ಬಳಿಕ ಬೇವು ಬೆಲ್ಲವನ್ನು ಸುಖ ದುಃಖಗಳ ಸಮಾನ ತತ್ತ್ವ ಎಂದು ಭಾವಿಸಿ, ಮುಂದಿನ ಭವಿಷ್ಯದಲ್ಲಿ ದೇವರು ಒಳಿತನ್ನೇ ಕರುಣಿಸಲೆಂದು ಬೇಡಿಕೊಂಡು ಪ್ರಸಾದವನ್ನು ತೆಗೆದುಕೊಳ್ಳುವನು. ಹೀಗೆ ರೈತನು ತನ್ನ ಕೃಷಿಯ ಆಯುಧವಾದ ನೇಗಿಲನ್ನು ಭಕ್ತಿ ಗೌರವದಿಂದ ಪೂಜಿಸುವುದು ಯುಗಾದಿಯ ದಿನವೇ ಆಗಿದೆ. ಪುರಾಣ ಪದ್ಧತಿ ಪ್ರಕಾರವೂ ಯುಗಾದಿಗೆ ಮಹತ್ತರವಾದ ಆಧಾರಗಳಿವೆ. ಅಯೋಧ್ಯೆಯಲ್ಲಿ ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕವಾದುದು, ಮಹಾಭಾರತದಲ್ಲಿ ಬರುವ ಚೇದಿ ರಾಜ್ಯದ ಅರಸು ಉಗ್ರ ವಸುವಿನ ತಪಸ್ಸಿಗೆ, ಇಂದ್ರನು ತನ್ನ ಪದವಿಗೆ ಚ್ಯುತಿ ಬರುವುದೆಂಬ ಭಯದಿಂದ ಆತನ ತಪೋಭಂಗ ಮಾಡಲೆತ್ನಿಸಿ ವೈಜಂತಿ ಮಾಲೆಯನ್ನು ಅವನಿಗೆ ಕೊಟ್ಟು ಚಿನ್ನದ ಕಲಶವುಳ್ಳ ಚಕ್ರಾಧಿಪತ್ಯದ ಧ್ವಜವನ್ನು ರಾಜನ ತಲೆಯ ಮೇಲೆ ಇಟ್ಟುದು ಈ ಯುಗಾದಿಯ ಹಬ್ಬದಂದೇ ಆಗಿದೆ. ಭಾರತದಾದ್ಯಂತ ದೇವಸ್ಥಾನ ಮಂದಿರ, ಮನೆ, ಮಠವೆನ್ನದೆ ಸರ್ವತ್ರ ಈ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ.

---

ಚೈತ್ರೇ ಮಾಸಿ ಮಹಾಬಾಹೋ ಪುಣ್ಯಾಯ ಪ್ರತಿಪತ್ಪರಾ
ಅಸ್ಯಾಂ ವೈ ನಿಂಬ ಪತ್ರಾಣಿ ಪ್ರಾಶ್ಯ ಸಂಶೃಣುಯಾತ್ತಿಥಿಮ್
ಶಕ ವತ್ಸರ ಭೂಪ ಮಂತ್ರಿಣಾಂ
ರಸಧಾನ್ಯೇಶ್ವರ್ಮೇಘಪತೀನಾಂ
ಶ್ರವಣಾತ್ಪಠನಾಶ್ಚೈವ ನೃಣಾಂ
ಶುಭತಾಂ ಯಾತ್ಯಶುಭಂ ಸಹಶ್ರಿಯಾ

– ಮಹಾಬಾಹೋ! ಚೈತ್ರ ಶುದ್ಧ ಪಾಡ್ಯಮಿಯು ಪುಣ್ಯಕರವಾದುದು. ಅಂದು ಬೇವಿನ ಚಿಗುರನ್ನು ತಿಂದು, ತಿಥಿ, ನಕ್ಷತ್ರ, ಶುಕ, ವರ್ಷ ವರ್ಷಾಧಿಪತಿ, ರಸ, ಧಾನ್ಯಾಧಿಪತಿ, ಮೇಘಾಧಿಪತಿ ಮೊದಲಾದವರ ಬಗ್ಗೆ ಕೇಳಿ ತಿಳಿಯಬೇಕು. ಇದರಿಂದ ಮಾನವರಿಗೆ ಅಶುಭ ನಿವಾರಣೆಯಾಗಿ, ಲಕ್ಷ್ಮಿ ಒಲಿಯುವಳು.

---

# ದಾಸೋಹಂ ಕೋಸಲೇಂದ್ರಸ್ಯ

ಇದು ನಮ್ಮ ಸಂಸ್ಕೃತಿಯಲ್ಲಿ ಕಂಡು ಬರುವ ಒಂದು ವಿಶೇಷ ವಿಷಯ ಎಂದರೆ ಯಾವ ಹಳ್ಳಿಗೇ ಹೋಗಲಿ ಷಹರಿಗೇ ಹೋಗಲಿ ಅಲ್ಲಿ ಕಾಣಿಸುವುದು ಒಂದು ಬೆನಕನ ಗುಡಿ, ಇನ್ನೊಂದು ಹನುಮನ ಗುಡಿ. ಊರ ದೇವರು ಯಾರೇ ಆಗಿರಲಿ ಇವರುಗಳ ಗುಡಿ ಇದ್ದೇ ಇರುತ್ತವೆ. ದೊಡ್ಡ ದೊಡ್ಡ ದೇವಸ್ಥಾನಕ್ಕೆ ಹೋದರೂ ಮುಖ್ಯವಾದ ದೇವರು ಯಾರೇ ಆಗಿರಲಿ ಒಂದು ಕಡೆ ಗಣಪ, ಒಂದು ಕಡೆ ಹನುಮ ಕಾಣಿಸಲೇಬೇಕು. ಇವರಿಬ್ಬರೂ ಅತಿ ದೊಡ್ಡ ದೇವರುಗಳಲ್ಲ, ತುಂಬಾ ಚಿಲ್ಲರೆ ದೇವರೆಗಳೂ ಅಲ್ಲ. ಇವರಿಬ್ಬರೂ ಎಲ್ಲಾ ಕಡೆಯೂ ಪ್ರಮುಖ ದೇವರುಗಳು

ಗಣೇಶನು ವಿಘ್ನನಾಶಕನಾಗಿ ಪೂಜಾರ್ಹನಾದರೆ ಹನುಮ ಹಾಗಲ್ಲ. ಊರೊಟ್ಟಿಗೆ ಒಳ್ಳೆಯದಾಗ ಬೇಕಾದರೆ, ಊರು ಕೇರಿಗೆ ಒದಗಿರುವ ಕೇಡು ದೂರವಾಗಬೇಕಾದರೆ ಆಗಬೇಕು ಹನುಮ ಪೂಜೆ, ಊರೊಳಗೆ ಗಣಪ, ಊರ ಹೊರಗೆ ಹನುಮ. ಇವರಿಂದ ನಮ್ಮ ವಾಸಸ್ಥಳ ಕ್ಷೇಮ. ಆದ್ದರಿಂದ ಅವರಿಗೆ ಸಲ್ಲುವುದು ತಪ್ಪದೆ ಭಕ್ತಿಯ ಪೂಜೆ. ಅಲ್ಲಲ್ಲೇ ಕಾಣಸಿಗುವರು ಹನುಮೋಪಾಸಕರು, ಇವರು ಯಂತ್ರ, ತಂತ್ರ, ತಾಯಿತ, ಮಂತ್ರಗಳಿಂದ ಭೀತಿ ಭಯತೊಲಗಿಸುವರು, ದೆವ್ವ ಪಿಶಾಚಿ ಬಿಡಿಸುವರು, ಆನೆಯನ್ನು ಕಂಡಾಗ ಹನುಮನ ನೆನಪೂ ಆಗಿ ಕೈಮುಗಿಯುವುದೂ ಉಂಟು.

ಆಂಜನೇಯನನ್ನು ಸುಂದರ ಮೂರ್ತಿಯೆಂದೂ ವ್ಯವಹರಿಸುತ್ತಾರೆ, ಅವನಿಗೆ ಈ ಹೆಸರು, ಅವನ ದಿವ್ಯ ಗುಣ ಚೇಷ್ಟೆಗಳಿಂದ ಅನ್ವರ್ಥವಾಗಿದೆ. ಶ್ರೀಮದ್ರಾಮಾಯಣದಲ್ಲಿ ಅವನೇ ಪ್ರಧಾನವಾಗಿರುವ ಕಾಂಡವನ್ನು ಸುಂದರಕಾಂಡವೆಂದೇ ಕರೆಯಲಾಗಿದೆ. ಕಾರ್ಯಸಿದ್ಧಿಗೆ, ಅಭೀಷ್ಟಸಿದ್ಧಿಗೆ ಈ ಕಾಂಡವನ್ನು ಮೇಲೆ ಮೇಲೆ ಪಾರಾಯಣ ಮಾಡುತ್ತಾರೆ.

ಆಂಜನೇಯನು ಅಂಜನಾದೇವಿಯ ಮಗ, ಅಂಜನಾದೇವಿಯು ಕೇಸರಿಯೆಂಬ ವಾನರ ಶ್ರೇಷ್ಠನ ಪತ್ನಿ, ಅಂಜನೆಗೆ ವಾಯುದೇವರ ಪ್ರಸಾದದಿಂದ ಹುಟ್ಟಿದ ಮಗ ಆಂಜನೇಯ. ಇವನಿಗೆ ಹನುಮಂತ, ಮಾರುತಿ ಎಂಬುವೂ ದುಂಟು. ಹೆಸರುಗಳು, ವಾಯುದೇವರ ಪುತ್ರನಾದ್ದರಿಂದ ಮಾರುತಿಗೆ ಬಂದಿತು ಮಹತ್ವ. ಹುಟ್ಟಿದ ಒಡನೆ ಬಾಲಸೂರ್ಯನನ್ನು ನೋಡಿದ, ಕೆಂಪಾದ ಸೊಗಸಾದ ಹಣ್ಣೆಂದು ತಿಳಿದು ಅದನ್ನು ಹಿಡಿದು ತಿನ್ನಲು ಆಕಾಶಕ್ಕೆ ನೆಗೆದ. ಈ ಸಲ್ಲದ ಕೆಲಸಕ್ಕಾಗಿ ದೇವತೆಗಳ ಒಡೆಯನಾದ ಇಂದ್ರನಿಂದ ಹೊಡೆಯಲ್ಪಟ್ಟು ವಜ್ರಾಯುಧದ ಆಘಾತಕ್ಕೆ ಒಳಗಾದ ಅವನ ಹನು (ದವಡೆ) ಕೆತ್ತಿಹೋಗಿ ಹನುಮಂತನಾದ. ವಾಯುವು ತನ್ನ ಪುತ್ರನಿಗಾದ ಕೆಡಕಿಗಾಗಿ ಕೋಪಗೊಂಡ, ಬ್ರಹ್ಮನು ಬಂದು ಸಮಾಧಾನ ಪಡಿಸಿದ, ಮಗುವಿಗೆ ವರವನ್ನು ಕೊಟ್ಟ, ಆಂಜನೇಯನು ಅಜೇಯನಾದ, ಯಾವ ಶಸ್ತ್ರಾಸ್ತ್ರಾಘಾತಗಳಿಂದಲೂ ಅವನಿಗೆ ಮೃತಿಯಿಲ್ಲದಾಯಿತು, ಬ್ರಹ್ಮನಿಂದ ಹೀಗೆ ಅನುಗ್ರಹೀತನಾಗಿ ಹನುಮಂತನು ಜಗತ್ಪೂಜ್ಯನೂ ಪಾವನ ಮೂರ್ತಿಯೂ ಆದ, ಈತನೇ ಪ್ರಾಣದೇವರಾಗಿ, ಮುಖ್ಯಪ್ರಾಣನಾಗಿ, ಅಭೀಷ್ಟಪ್ರದನಾಗಿದ್ದಾನೆ.

ಆಂಜನೇಯನ ಮಹತ್ವವು ಜನಾದರಣೀಯವಾದುದು ಈ ಕಾರಣಗಳಿಂದ ಮಾತ್ರವಲ್ಲ ಅದಕ್ಕೆ ಇರುವ ನಿಜವಾದ ಕಾರಣ ಬೇರೊಂ



**ಶ್ರೀ ಎಸ್. ನರಸಿಂಹಾಚಾರ್ಯ**

ಅವನು ಸುಗ್ರೀವನ ಮಂತ್ರಿಯಾಗಿ ರಾಮ ದೇವರ ದರ್ಶನ ಮಾಡಿದ ಮೇಲೆ ಇವನ ಮಹತ್ವ ವೃದ್ಧಿ ಹೊಂದಿತು. ವಾಲಿ ಸುಗ್ರೀವರ ವ್ಯಾಜ್ಯದಲ್ಲಿ ಇವನ ಪಾತ್ರವೇನೋ ತಿಳಿಯದು. ವಾಲಿಯು ರಾಜ್ಯವನ್ನು ಬಿಟ್ಟು, ಸುಗ್ರೀವನ ಹಿತಚಿಂತಕನಾಗಿ ಋಷ್ಯಮೂಕ ಪರ್ವತದಲ್ಲಿ ಸುಗ್ರೀವನ ಸಂಗಡ ಇದ್ದ. ಶ್ರೀರಾಮದರ್ಶನವಾಯಿತು, ಪ್ರಥಮ ಭೇಟಿಯಲ್ಲೇ ರಾಮನಿಗೆ ಮನಸೋತ. ಸುಗ್ರೀವನಿಗೆ ಸಖ್ಯಮಾಡಿಸಿದ ರಾಮನೊಂದಿಗೆ. ರಾಮನ ಬಲಪರೀಕ್ಷೆ ಸುಗ್ರೀವನಿಂದ ಆಯಿತು. ವಾಲಿಯ ವಧೆಯಾಯಿತು. ಇವುಗಳೆಲ್ಲದರಿಂದ ಪ್ರಭಾವಿತನಾದ ಮಾರುತಿಯು ಶ್ರೀರಾಮನಿಗೆ ತನ್ನನ್ನೇ ಪೂರ್ತಿ ತೆತ್ತುಕೊಂಡ. ಶ್ರೀರಾಮನ ಧ್ಯಾನವನ್ನು ಸತತಮಾಡತೊಡಗಿದ. ಅಭಿಯುಕ್ತರಿಗೆ ಆಂಜನೇಯನ ಹೃದಯಮಂದಿರದಲ್ಲಿ ರಾಮ ಪ್ರತಿಷ್ಠಿತನಾಗಿರುವುದು ಗೋಚರವಾಯಿತು. ಇದರಿಂದ ಆಂಜನೇಯ ಗಣ್ಯ ದೇವರಾದ, ಜನಾದರಣೀಯನಾದ. ಶ್ರೀರಾಮನ ಕಥಾಕಾಲಕ್ಷೇಪಕ್ಕೆ ಕುಳಿತರೆ ಮುಂದುಗಡೆ ಹನುಮ ಪೀಠ ಸಮರ್ಪಣೆ ಮಾಡಿಯೇ ಕಥಾ ಪ್ರಾರಂಭವಾಗಬೇಕು. ಇದು ಕಡ್ಡಾಯದ ಆಚರಣೆಯಾಯಿತು. ಶ್ರೀರಾಮಭಕ್ತಿಸಾಮ್ರಾಜ್ಯದ ಅಗ್ರೇಸರನಿಗೆ ಪೂಜ್ಯತೆ ಸಂದಾಯವಾಗಲೇ ಬೇಕಲ್ಲವೆ!

ಶ್ರೀಮದ್ರಾಮಾಯಣದಲ್ಲಿ ಆಂಜನೇಯನನ್ನು ನಮಗೆ ವರಕವಿ ವಾಲ್ಮೀಕಿಗಳು ಕಾಣಿಸಿರುವ ಕೆಲವು ಸನ್ನಿವೇಶಗಳನ್ನು ಮನಗಂಡರೆ ಅವನ ಸ್ವರೂಪ ರೂಪಗುಣ ಸಂಪತ್ತನ್ನೂ, ಕೈಂಕರ್ಯ ಶ್ರೀಯನ್ನೂ ತಿಳಿಯಬಹುದು, ರಾಮಲಕ್ಷ್ಮಣರು ಋಷ್ಯಮೂಕ ಪರ್ವತದ ಸನಿಹಕ್ಕೆ ಸುಗ್ರೀವನನ್ನು ಹುಡುಕಿಕೊಂಡು ಬರುತ್ತಿದ್ದಾರೆ. ಗಿರಿಶೃಂಗದಿಂದ ಸುಗ್ರೀವನು ರಾಮಲಕ್ಷ್ಮಣರನ್ನು ನೋಡಿದ ಪ್ರಸಂಗ. ಒಡನೆ ಮರದಿಂದ ಮರಕ್ಕೆ ಶೃಂಗದಿಂದ ಶೃಂಗಕ್ಕೆ ಪರ್ವತದಲ್ಲಿ ನೆಗೆದು ನೆಗೆದು ಅವನು ತನ್ನ ಭಯವನ್ನು ಪ್ರದರ್ಶಿಸುತ್ತಾನೆ. ರಾಮಲಕ್ಷ್ಮಣರು ವಾಲಿಯಿಂದ ನೇಮಿಸಲ್ಪಟ್ಟು ತನ್ನ ಹತ್ಯೆಗಾಗಿ ಬಂದವರೆಂದು ಭ್ರಮಿಸುತ್ತಾನೆ. ಅವನು ಹೇಳುತ್ತಾನೆ "ಕಸ್ಮನಸ್ಮಾತ್ ಭಯಂ ದೃಷ್ಟ್ವಾ ಹ್ಯೇತ್ ಸುರಸುತೋಪಮ್". ಇತರ ಅನುಚರರೂ ಸುಗ್ರೀವನ ಜೊತೆಗೂಡಿ ಭಯ ವಿಹ್ವಲರಾಗುತ್ತಾರೆ, ಆ ಸಂದರ್ಭದಲ್ಲಿ ಆಂಜನೇಯನನ್ನು ನಮಗೆ ಪ್ರಥಮತಃ ಋಷಿಕವಿಗಳು ಕಾಣಿಸುತ್ತಾರೆ. ಅಕಂಪಿತನಾದ ಆಂಜನೇಯನು ಭಯದಿಂದ ಕಂಪಿಸುತ್ತಿರುವ ಪದಭ್ರಷ್ಟನಾದ ಕಪಿರಾಜನಾದ ಸುಗ್ರೀವನಿಗೆ ಹೀಗೆ ಹೇಳುತ್ತಾನೆ;

ಅಹೋ ಶಾಖಾಮೃಗತ್ವಂ ತೇ
ವ್ಯಕ್ತ ಮೇವ ಪ್ಲವಂಗಮ ।
ಲಘುಚಿತ್ತತಯಾ ತ್ಮಾನಂ
ನ ಸ್ಥಾಪಯಸಿ ಯೋಮತೌ ॥

ಬುದ್ಧಿ ವಿಜ್ಞಾನ ಸಂಪನ್ನ
ಇಂಗಿತೈಃ ಸರ್ವಮಾಚರ ।
ನಹ್ಯ ಬುದ್ಧಿಗತೋ ರಾಜಾ
ಸರ್ವಭೂತಾನಿ ಶಾಸ್ತಿಹಿ ॥

ಸುಗ್ರೀವನಿಗೆ ಆಂಜನೇಯನು ಮಂತ್ರಿ, ಧೀಮಂತನೂ ಧೈರ್ಯವಂತನೂ ಆದ ಮಂತ್ರಿ ಆಂಜನೇಯ ಕಪಿರಾಜನಿಗೆ ಕಪಿತ್ವ ಬುದ್ಧಿಯನ್ನು ಬಿಟ್ಟು, ಭಯವನ್ನು ಮೆಟ್ಟನಿಂತು, ವಿಚಾರಮಾಡಲು ಪ್ರೇರಿಸುತ್ತಿರುವ ಅಭಯಮೂರ್ತಿಯನ್ನು ಋಷಿಗಳು ನಮಗೆ ದರ್ಶನ ಮಾಡಿಸುತ್ತಾರೆ. ನಂತರ ಅವನು ಸುಗ್ರೀವನಿಗೆ ಗುಪ್ತಚಾರನೂ ದೂತನೂ ಆಗಿ ರಾಮ ಸನ್ನಿಧಾನಕ್ಕೆ, ಬರುತ್ತಾನೆ. ಬಂದಾಗ ರಾಮನಿಗೆ ಕಾಣಿಸಿಕೊಂಡ ಬಗೆ;

ಕಪಿ ರೂಪಂ ಪರಿತ್ಯಜ್ಯ
ಹನುಮಾನ್ ಮಾರುತಾತ್ಮಜಃ ।
ಭಿಕ್ಷುರೂಪಂ ತತೋಭೇಜೇ
ಶಠ ಬುದ್ಧಿ ತಯಾ ಕಪಿಃ ॥

ಇಚ್ಛಾರೂಪಿಯಾದ ಹನುಮನು ಕಪಿರೂಪವನ್ನು ಬಿಟ್ಟು ಸಂನ್ಯಾಸಿರೂಪದಲ್ಲಿ ರಾಮನ ಮುಂದೆ ನಿಂತ, ಕಪಿತ್ವದ ಚಂಚಲತ್ವವನ್ನು ಬಿಟ್ಟು ವೈರಾಗ್ಯ, ದಾಸ್ಯ ಸಂಕೇತವಾದ ಸನ್ಯಾಸಿರೂಪದಲ್ಲಿ ರಾಮನ ಮುಂದೆ ನಿಂತು ಪರಿಚಯಿಸಿಕೊಂಡ.

ಪ್ರಾಪ್ತೋಹಂ ಪ್ರೇಷಿತಸ್ತೇನ
ಸುಗ್ರೀವೇಣ ಮಹಾತ್ಮನಾ ।
ರಾಜ್ಞಾ ವಾನರ ಮುಖ್ಯೇನ
ಹನುಮಾನ್ನಾಮ ವಾನರಃ ॥

ಆಂಜನೇಯನ ಮಾತುಗಳನ್ನು ಮಾತನಾಡುವ ಕ್ರಮವನ್ನು ನೋಡಿ ಸುಗ್ರೀವದೂತನಾಗಿ ಬಂದವನನ್ನು ಕುರಿತು ಪ್ರಶಂಸಿಸಿ ರಾಮನು ಲಕ್ಷ್ಮಣನಿಗೆ ಹೀಗೆ ಹೇಳಿದನು–

ಏವಂ ವಿಧೋ ಯಸ್ಯದೂತಃ
ನಭವೇತ್ ಪಾರ್ಥಿವಸ್ಯತು ।
ಸಿದ್ಧ್ಯಂತಿಹಿ ಕಥಂತಸ್ಯ
ಕಾರ್ಯಾಣಾಂ ಗತಯೋನಘ ॥

ಹೀಗೆ ಬುದ್ಧಿವಂತಿಕೆ, ವಿನಯ, ಕಾರ್ಯಸಿದ್ಧಿಗಳಿಗೆ ಹೆಸರಾದ ಹನುಮ ಲಂಕಾಪಟ್ಟಣಕ್ಕೆ ಹೋಗಿ ಸೀತೆಗೆ ರಾಮದೂತನಾಗಿ ಕಾಣಿಸಿದ ಬಗೆ ತುಂಟಾ ವಿಸ್ಮಯಜನಕವಾಗಿದೆ. ರಾವಣನು ಸೀತೆಯನ್ನು ಪ್ರಲೋಭಿಸಿ ಅವಳಿಂದ ತಿರಸ್ಕೃತನಾಗಿ ಕ್ರುದ್ಧನಾಗಿ ಅವಳಿಗೆ ಪ್ರಾಣಭಯವ

(27ನೇ ಪುಟ ನೋಡಿ)

## ಆರ್ಜಿತ ಅಭಿಷೇಕ
## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಅರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ, ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.



# ಗೃಹಲಕ್ಷ್ಮಿ





# ತಾಯಿ ಕೌಸಲ್ಯೆ

ರಾಮನು ಅಭಿಷೇಚನದ ಭಾಂಡಕ್ಕೆ ಒಂದು ಪ್ರದಕ್ಷಿಣೆಮಾಡಿ ಮೆಲ್ಲನೆ ಮುಂದೆ ಹೊಕ್ಕನು. ಅಭಿಷೇಚನ ತಪ್ಪಿತೆಂಬ ಕಾರಣದಿಂದ ಅವನ ಮನಸ್ಸಿನಲ್ಲಿ ವಿಕಾರ ತೋರಲಿಲ್ಲ. ಅವನು ಛತ್ರಚಾಮರಗಳನ್ನೂ ಪರಿವಾರದ ಜನವನ್ನೂ ಬೇಡವೆಂದು ಹೇಳಿ ತಾನು ಮಾತ್ರ ತಾಯಿಮಂದಿರವನ್ನು ಕುರಿತು ಹೊರಟನು. ಮಗನ ಅಭಿಷೇಚನದ ದಿನವೆಂದು ಅವನ ಅಭಿವೃದ್ಧಿಗಾಗಿ ದಾನಧರ್ಮಗಳನ್ನು ನಡೆಸುತ್ತ ವ್ರತದಲ್ಲಿದ್ದ ಕೌಸಲ್ಯಾದೇವಿ ಕುಮಾರನು ಬರುವುದನ್ನು ಕಂಡು ಹರ್ಷದಿಂದ ಎದುರಿಗೆ ಬಂದಳು. "ಮಹಾತ್ಮರಾದ ವೃದ್ಧ ಧರ್ಮಶೀಲ ರಾಜರ್ಷಿಗಳ ಆಯುಸ್ಸೂ ಕೀರ್ತಿಯೂ ಧರ್ಮವೂ ನಿನ್ನಲ್ಲಿ ಬೆರೆಯಲಿ," ಎಂದು ಹರಸಿ, ನಿಮ್ಮ ತಂದೆ ಸತ್ಯಪ್ರತಿಜ್ಞನು. ಇಂದು 'ನಿನಗೆ ಯೌವರಾಜ್ಯಾಭಿಷೇಚನವನ್ನು ಮಾಡುತ್ತಾನೆ,' ಎಂದು ಅರಸನನ್ನು ಪ್ರಶಂಸಿಸಿದಳು; "ಕುಳಿತುಕೋ ಊಟಮಾಡು" ಎಂದು ಮಗನನ್ನು ಆದರಿಸಿದಳು; ವಾಲ್ಮೀಕಿಯ ಜೀವನವಿಜ್ಞಾನ ಇಂಥ ಸಂದರ್ಭದಲ್ಲಿ ಇಂಥ ಸಣ್ಣ ವಿಷಯದಲ್ಲಿ, ಪರಿಪೂರ್ಣವಾಗಿ ಬೆಳಗುತ್ತದೆ. ರಾಜ್ಯ ಬಂದು ರಾಜ್ಯ ಹೋಗುವ ಸಂದರ್ಭದಲ್ಲಿ ದೊಡ್ಡ ರಾಣಿ ಯುವರಾಜನಾಗುವ ಮಗನನ್ನು ಮಣೆಯಮೇಲೆ ಕೂರಿಸಿ ಊಟಮಾಡು ಎಂದಳೆಂದು ಕವಿ ಹೇಳಿದಾನೆ. ತಾಯಾದವಳಿಗೆ ಯಾವ ಹೊತ್ತಿನಲ್ಲಾಗಲಿ ಮಗ ಊಟಮಾಡುವುದು ದೊಡ್ಡ ವಿಷಯ. ವಾಲ್ಮೀಕಿ ಈ ಮಾತನ್ನು ಸಣ್ಣದೆಂದು ಬಿಡಲಾರದೆಹೋದನು. ಕೌಸಲ್ಯೆ ಮಗನನ್ನು ಸಂಭ್ರಮದಿಂದ ಮಣೆಯ ಮೇಲೆ ಕೂರಿಸಿ ಊಟಮಾಡೆಂದು ಹೇಳಿ, "ನೀನು ತಂದೆಯಿಂದ ಯೌವರಾಜ್ಯಾಭಿಷೇಚನ ಹೊಂದುತ್ತೀಯೆ." ಎಂದು ನುಡಿಯಲು ರಾಮನು ತಾಯಿಗೆ ಕೈಮುಗಿದು ತಲೆಬಾಗಿ ಉತ್ತರ ಹೇಳಿದನು. ಈ ಸಂದರ್ಭ ಬಹು ಭಾವಭರಿತವಾದದು. ಇಲ್ಲಿ ಎರಡು ಜೀವ ಒಂದನ್ನೊಂದು ಎದುರಿಸಿವೆ. ಒಂದು ತಾಯಿ ಜೀವ. ಕೌಸಲ್ಯೆ ರಾಮನ ಬಳಿಗೆ ಬಂದದ್ದನ್ನು ವಾಲ್ಮೀಕಿ ತಾಯಿಕುದುರೆ ಮರಿಯ ಬಳಿಗೆ ಬಂದಂತೆ ಎಂದು ವರ್ಣಿಸಿದ್ದಾನೆ. ಮರಿ ಬೆಳೆದಿದೆ, ಆದರೂ ತಾಯಿಗೆ ಅದು ಎಂದೆಂದಿಗೂ ಮರಿಯೆ. ಮರಿಗಾದರೆ ತಾನು ಬೆಳೆದಿರುವ ಕಾರಣದಿಂದ ಸ್ವಲ್ಪ ಸಂಕೋಚ. ನಾಚಿಕೆ. ತಾಯಿ ಜೀವಕ್ಕೆ ಇನ್ನೂ ಮಗ ಯುವರಾಜನಾಗುವನೆಂದೇ ಭ್ರಮೆ. ಮಗನ ಜೀವಕ್ಕೆ ಆ ಭ್ರಮೆ ಹರಿದುಹೋಗಿತ್ತು. ಒಂದು ಜೀವ ಬಾಳಿನ ಪರಮಾವಧಿಯ ಸುಖವನ್ನು ಪಡೆದೆನೆಂದು ಸಂತೋಷದಲ್ಲಿದೆ; ಇನ್ನೊಂದು ಜೀವ, ತನಗಾಗಿಯಲ್ಲ, ಆ ಜೀವಕ್ಕಾಗಿ, ಆ ಸುಖ ತಪ್ಪಿತೆಂದು ಚಿಂತೆಯಲ್ಲಿದೆ. ಕುತೂಹಲವು ನಿರಾಶೆಯನ್ನೂ ಸಂತೋಷವು ವ್ಯಥೆಯನ್ನೂ ಬೆಳದಿಂಗಳು ಕತ್ತಲನ್ನೂ ಎದುರಿಸಿ ನಿಂತಿರುವ ಒಂದು ಸಂದರ್ಭವನ್ನು ಕವಿ ಇಲ್ಲಿ ತೋರಿಸಿದ್ದಾನೆ. ತಾಯಿ ತನ್ನಿಂದ ನಿರೀಕ್ಷಿಸುವ ಸಂತೋಷವನ್ನು ತಾನು ಅವಳಿಗೆ ಕೊಡುವುದಕ್ಕೆ ಇಲ್ಲವೆಂಬ ಕಾರಣದಿಂದ ರಾಮನಿಗೆ ನಾಚಿಕೆ. ಅವನು ಕೈಕೇಯಿಯ ಮಂದಿರದಲ್ಲಿ ನಡೆದ ಮಾತನ್ನು ತಾಯಿಗೆ ಹೇಳಿ, 'ತಾನು ಅರಣ್ಯಕ್ಕೆ ಹೋಗಬೇಕಾಗಿದೆಯೆಂದೂ ಭರತನು ರಾಜ್ಯವನ್ನಾಳುವನೆ'ಂದೂ ತಿಳಿಸಿದನು. ಕೊಡಲಿಯಿಂದ ಕಡಿದ ಸಾಲಯಷ್ಟಿಯಂತೆ ಕೌಸಲ್ಯಾದೇವಿ ನೆಲಕ್ಕೆ ಬಿದ್ದಳು. ರಾಮನು ತಾಯನ್ನು ಮೇಲಕ್ಕೆ ಎತ್ತಿದನು; ಧೂಳಾದ ಆಕೆಯ ಮೈಯಿಂದ ಧೂಳನ್ನು ಕೊಡಹಿದನು. ಕೌಸಲ್ಯೆ ಎಚ್ಚೆತ್ತು, "ಅಪ್ಪಾ, ನೀನು ಹುಟ್ಟದೆ ಇದ್ದಿದ್ದರೆ ನಾನು ಈ ದುಃಖವನ್ನು ಕಾಣುತ್ತಿರಲಿಲ್ಲ. ಮಕ್ಕಳಿಲ್ಲದವರಿಗೆ ಮಕ್ಕಳಿಲ್ಲವೇ ಎಂಬುದು ಒಂದೇ ದುಃಖ. ಅವರು ಬೇರೆಯ ದುಃಖವನ್ನು ಕಾಣರು. ನಾನು ಗಂಡನೊಂದಿಗೆ ಸಂಸಾರಮಾಡಿ ಸುಖ ಸೌಭಾಗ್ಯಗಳನ್ನು ಕಂಡವಳಲ್ಲ, ಹಿರಿಯ ಹೆಂಡತಿಯಾದರೂ ಬೇರೆಯ ಹೆಂಡಿರಿಂದ ಅನೇಕ ಸಣ್ಣ ಮಾತನ್ನು ಕೇಳಿ ಅನುಭ

**ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್**

ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ರಾಮಾಯಣ ಅಧ್ಯಯನ ಬಹು ಸೂಕ್ಷ್ಮವೂ, ಶ್ಲಾಘ್ಯವೂ ಆದದ್ದು. ಅವರು ರಾಮಾಯಣವನ್ನು ಕುರಿತು ಬರೆದ ಮಹತ್ವದ ಕೃತಿ ಆದಿಕವಿ ವಾಲ್ಮೀಕಿ. ಆದರ ಒಂದು ಭಾಗವನ್ನು ಇಲ್ಲಿ ಉದ್ಧರಣ ಮಾಡಲಾಗಿದೆ. ಕೌಸಲ್ಯೆಯ ಮಾತೃಹೃದಯದ ವಿವರಗಳನ್ನು ವಾಲ್ಮೀಕಿ ಎಳೆ ಎಳೆಯಾಗಿ ಬಿಡಿಸಿದಂತೆಯೇ ಅದನ್ನು ಓದುಗರಿಗೆ ಇನ್ನೂ ಹತ್ತಿರವಾಗುವಂತೆ ಮಾಡಿದ್ದಾರೆ ಮಾಸ್ತಿಯವರು.

—ಸಂ॥

ವಿಸಿದೆನು. ನೀನು ಇಲ್ಲಿರುವಾಗಲೇ ಹೀಗಾದ ಮೇಲೆ ಕಾಡಿಗೆ ಹೋದ ಮೇಲೆ ಇನ್ನೇನು? ನನಗೆ ಸಾವೇ ನಿಜ; ಇನ್ನು ನನ್ನನ್ನು ಸೇವಿಸುವರು ಯಾರು, ಅನುಸರಿಸುವರು ಯಾರು? ಇನ್ನು ನಾನು ಕೈಕೇಯಿಯ ಪರಿವಾರದ ಜನಕ್ಕೆ ಸಮ; ಅಥವಾ ಅದಕ್ಕೂ ಕೀಳು. ನಿನ್ನ ಮುಖವನ್ನು ನೋಡದೇ ನಾನು ದಿನಗಳನ್ನು ಹೇಗೆ ಕಳೆಯಲಿ? ಉಪವಾಸ ಯೋಗಗಳನ್ನು ಮಾಡಿ ಬಹುವಿಧವಾದ ಶ್ರಮವನ್ನು ಅನುಭವಿಸಿ ನಾನು ನಿನ್ನನ್ನು ಬೆಳೆಸಿದೆನು. ಎಲ್ಲ ವ್ಯರ್ಥವಾಯಿತು. ಈ ಮಾತನ್ನು ಕೇಳಿಯೂ ನನ್ನ ಹೃದಯ ಒಡೆಯದಿದೆಯಲ್ಲ; ಅದು ನಿಜವಾಗಿಯೂ ಸ್ಥಿರವಾದದ್ದು. ಮೃತ್ಯು ನನ್ನನ್ನು ಅರಿಯದೆಂದೇ ಕಾಣುತ್ತದೆ; ಅಥವಾ ಯಮನ ಮಂದಿರದಲ್ಲಿ ನನಗೆ ಸ್ಥಳವಿಲ್ಲವೆ ಹೋಗಿರಬೇಕು. ಆದರಿಂದಲೇ ಅಂತಕನು ನನ್ನನ್ನು ಇನ್ನೂ ಕೊಂಡುಹೋಗಲಿಲ್ಲ. ನೀನಿಲ್ಲದೆ ನಾನು ಬದುಕಿ ಆಗತಕ್ಕದ್ದೇನು? ನಾನು ನಿನ್ನ ಹಿಂದೆಯೇ ಬರುತ್ತೇನೆ, ಎಂದಳು. ಹೀಗೆ ದುಃಖಿಸುತ್ತಿರುವ ಕೌಸಲ್ಯೆಯನ್ನು ನೋಡಿ ಲಕ್ಷ್ಮಣನು, "ತಾಯಿ, ಹೆಂಗಸೊಬ್ಬಳ ಮಾತಿಗಾಗಿ ರಾಮನು ರಾಜ್ಯವನ್ನು ಬಿಟ್ಟು ವನಕ್ಕೆ ಹೋಗುವುದೆನ್ನುವುದು ನನಗಾದರೂ ಒಪ್ಪಲಿಲ್ಲ. ವಿಪರೀತನೂ, ವೃದ್ಧನೂ, ವಿಷಯದಿಂದ ಪ್ರಧರ್ಷಿತನೂ ಆದ ನೃಪನು ಹೆಣ್ಣಿನ ಮೋಹಕ್ಕಾಗಿ ಯಾವುದನ್ನು ಹೇಳದೆ ಬಿಡುವನು? ರಾಮನನ್ನು ರಾಷ್ಟ್ರದಿಂದ ಹೊರಡಿಸಿ ವನಕ್ಕೆ ಅಟ್ಟಬೇಕಾದಂಥ ದೋಷ ಅಥವಾ ಅಪರಾಧ ಅವನಲ್ಲಿ ಯಾವುದಿದೆಯೋ ನಾನು ಅದನ್ನು ಕಾಣೆ. ಅವನ ಹಗೆಯಾಗಲೀ ಅವನಿಂದ ದಂಡನೆ ಪಡೆದವನಾಗಲಿ ಅವನ ವಿಷಯದಲ್ಲಿ ದೋಷವನ್ನೆಣಿಸುವವರನ್ನು, ನಾನು ಅರಿಯೆನು. ದೇವಕಲ್ಪನೂ, ಋಜುಮಾರ್ಗ ಪ್ರವರ್ತಕನೂ, ದಾಂತನೂ, ಹಗೆಗಳಿಗಾದರೂ ವಾತ್ಸಲ್ಯವನ್ನು ತೋರಿಸುವವನೂ ಆದ ಧರ್ಮಿಷ್ಠನಾದ ಪುತ್ರನನ್ನು ನಿಷ್ಕಾರಣವಾಗಿ ಯಾರು ತಾನೇ ತೊರೆಯುವರು"? ಎಂದು ಹೇಳಿ ಅಣ್ಣನನ್ನು ಕುರಿತು, "ಅಣ್ಣ, ನಾನೂ ನೀನೂ ಎದುರಿಸಿದರೆ ಅವರನ್ನು ಕೊಂದು ಹಾಕುವೆವು. ತಂದೆ ಕೈಕೇಯಿಯಿಂದ ಪ್ರೋತ್ಸಾಹಿತನಾಗಿ ವಿರೋಧಿಸುವುದಾದರೆ ಅವನನ್ನು ಕೊಲ್ಲುವುದು ಅಥವಾ ಕಟ್ಟಿಹಾಕುವುದು ಕಾರ್ಯ. ಕಾರ್ಯವನ್ನು ಕಾಣದ ಮನುಷ್ಯ ಹಿರಿಯನಾದರೂ ಶಿಕ್ಷಾರ್ಹನು," ಎಂದು, ಮತ್ತೆ ಕೌಸಲ್ಯೆಯನ್ನು ಕುರಿತು, "ತಾಯಿ, ನಾನು ರಾಮನಲ್ಲಿ ಅನುರಕ್ತನಾಗಿದ್ದೇನೆ. ಸತ್ಯದಿಂದ ಧನುಸ್ಸಿನಿಂದ ದಾನದಿಂದ ಯಜ್ಞದಿಂದ ಆಣೆಮಾಡಿ ಹೇಳುತ್ತೇನೆ. ಹೊತ್ತಿದ ಅಗ್ನಿಯನ್ನಾಗಲಿ ಅರಣ್ಯವನ್ನಾಗಲಿ ರಾಮನು ಯಾವಾಗ ಪ್ರವೇಶಿಸುವನೋ ಆ ಅಗ್ನಿ ಆ ಅರಣ್ಯವನ್ನಾಗಲಿ ಅವನಿಗೂ ಮೊದಲು ನಾನು ಪ್ರವೇಶಿಸುತ್ತೇನೆ. ನೀನು ನೋಡು ನನ್ನ ಶೌರ್ಯದಿಂದ ನಿನ್ನ ಈ ದುಃಖವನ್ನು ಹರಿಸುತ್ತೇನೆ. ನೀನು ನೋಡು, ರಾಮನೂ ನೋಡಲಿ" ಎಂದು ಕೂಗಾಡಿದನು. ಲಕ್ಷ್ಮಣನ ಈ ಮಾತನ್ನು ಕೇಳಿ ಕೌಸಲ್ಯೆಗೆ ಸ್ವಲ್ಪ ಆಸೆ ತಲೆದೋರಿತು. ಈ ಹುಡುಗನ ಆರ್ಭಟದಿಂದ ಜನರು ಹೆದರಿ ರಾಮನ ವನವಾಸದ ಮಾತು ನಿಲ್ಲುವುದೇನೋ ಎಂದು, ಅಥವಾ ರಾಮನೂ ಲಕ್ಷ್ಮಣನೂ ಒಂದಾಗಿ ಶತ್ರುಪಕ್ಷವನ್ನು ಅಡಗಿಸಿದರೂ ಅಡಗಿಸಬಹುದು ಎಂದು, ಅವಳಿಗೆ ಚಪಲ. ರಾಮನು ಅರಣ್ಯಕ್ಕೆ ಹೊರಟಿದ್ದದ್ದು ತನಗೆ ಶಕ್ತಿಯಿಲ್ಲದ ಕಾರಣದಿಂದ ಅಥವಾ ಯಾರೊಬ್ಬರ ಭಯದಿಂದ ಅಥವಾ ಬಲವಂತದಿಂದ ಅಲ್ಲ ಎನ್ನುವುದು ಆಕೆಗೆ ತಿಳಿಯಲಿಲ್ಲ. ಊರಿನ

# ಕಾಯುವೊಲ್ಲೆಯೇಕೆ

ರಾವಣಾವರಂತೆ (ರಾವಣಾ! ಅವರಂತೆ?) ರಕ್ಷಿಸೋ
ಎಂದರೆ ರಕ್ಷಿಸಲೊಲ್ಲ್ಯಾಕೆ ಪರಾಕು ॥ ಪ ॥

ಕಾಮಿತಫಲವೀವ ಕರುಣಾಂಬುಧಿ ಎಂದು
ನಾ ಮೊರೆಹೊಕ್ಕೆನಲ್ಲೋ ರಾಮರಾವಣಾ
॥ ಅ.ಪ. ॥

ಎಡವಿದ್ದ ಮಾತ್ರದಿ ಪೆಣ್ಣಾದ ಗೌತಮ
ಮಡದಿಯು ನಿನ್ನವಳೇನೋ
ಕಡುಪ್ರೀತಿಯಿಂದ ಕಾಯಿದಿ ಕರಿರಾಜನು ನಿನ್ನ
ಒಡಲಲ್ಲಿ ಜನಿಸಿದನೇನೋ
ನಡುಗುತ ಮಗನ ನಾರಗನೆನ್ನಲು
ನುಡಿಕೇಳಿ ಪೊರೆದೆಲ್ಲೊ ರಾಮರಾವಣಾ 1

ಹಿಂದ್ವೈರಿ ದೆಸೆಯಿಂದ ಬಂದ ವಿಭೀಷಣನು
ತಂದೆಯ ಕಡೆಯವನೇನೋ
ಕುಂದು ಕುಂದೆಣಿಸದೆ ಕಾಯಿದಿ ಘಂಟಾಕರ್ಣ (?)
ಎಂದಾ ಮಾತಿನ ಬಗೆಯೇನೋ
ಬಂದು ಕಂಬದಿ ಶಿಶುವ ಬಾಧೆಯ ಬಿಡಿಸಿದಿ
ಆಪದ್ಬಾಂಧವ ನೀನಲ್ಲೋ ರಾಮರಾವಣಾ 2

ಉಲ್ಲಾಸದಿಂದ ಶಬರಿ ಉಂಡೆಂಜಲಿಗೊಡ್ಡಿದ
ವಲ್ಲಭ ನೀನಲ್ಲವೇನೋ
ಎಲ್ಲಿಯ ಬಲ್ಲಿದ್ದ ಪಿಡಿಯವಲಕ್ಕಿಗೆ ನೀಪೋಗಿ
ವಲ್ಲ್ಯೊಡ್ಡಿದ್ದು ಮರಕ್ಕೇನೋ
ಎಲ್ಲಿಯ ಮಾತಿದು ಪೇಳಲಂಜುವೆ ರಂಗ
ವಿಠಲ್ಲ ನೀನಲ್ಲೋ ರಾಮರಾವಣಾ 3

— ಶ್ರೀಪಾದರಾಜರು

ನಲ್ಲಿರುವುದಕ್ಕೆ ಅಧಿಕಾರವುಳ್ಳವನು, ಊರಿನಲ್ಲಿ ನಿಲ್ಲುವುದಕ್ಕೆ ಶಕ್ತಿಯುಳ್ಳವನು ಕಾಡಿಗೆ ಹೇನಾಗಿ ಏಕೆ ಹೋಗುವನು? ಇದು ಪ್ರಾಯಶಃ ಯಾರಿಗಾದರೂ ಹುಟ್ಟುವ ಸಂದೇಹವೇ. ರಾಮನನ್ನು ಕಾಡಿಗೆ ಅಟ್ಟು ತ್ತಿದ್ದದ್ದು ಕೈಕೇಯಿಯೂ ಅಲ್ಲ, ದಶರಥನೂ ಅಲ್ಲ; ರಾಮನಲ್ಲಿಯೇ ಇದ್ದ ಧರ್ಮ ವಿವೇ ಚನೆ. ಕತ್ತಿಯ ಅಲಗಿನಂತೆ ಸೂಕ್ಷ್ಮವಾದ ಧರ್ಮದ ಪಥದಲ್ಲಿ ರಾಮನು ಎಡೆತಪ್ಪದೆ ನಡೆಯಲಪೇಕ್ಷಿಸಿದನು. ಆ ಪಥ ಕತ್ತಿಯ ಅಲಗಿನಂತೆ ಹರಿತವಾದದ್ದೂ ಹೌದು. ಉಳಿ ದವರಿಗೆ ಆ ಪಥ ಇಷ್ಟು ಹರಿತವೆಂದು ಕಂಡಿತು; ಇಷ್ಟು ಸೂಕ್ಷ್ಮವೆಂದು ಕಾಣದೆ ಹೋಯಿತು. ರಾಣಿ ಮಗನನ್ನು ಕುರಿತು, "ಮಗು, ನಿನ್ನ ತಮ್ಮನ ಮಾತನ್ನು ಕೇಳಿ ದೆಯಲ್ಲವೆ? ಇನ್ನು ಮಾಡಬೇಕಾದ ಕೆಲಸ ವನ್ನು ಮಾಡು, ನನ್ನ ಸವತಿಯ ಅಧರ್ಮ ವಾಕ್ಯವನ್ನು ಕೇಳಿ ನನ್ನನ್ನು ಇಲ್ಲಿ ಬಿಟ್ಟು ಹೊರಟುಹೋಗುವುದು ನಿನಗೆ ತಕ್ಕದಲ್ಲ. ಧರ್ಮ ಧರ್ಮ ಎಂದು ಧರ್ಮವನ್ನು ನಡೆಸಲೆಳಸುವ ನೀನು ಇಲ್ಲಿಯೇ ಇದ್ದು ನನ್ನ ಶುಶ್ರೂಷೆಯನ್ನು ಮಾಡು. ಇದು ಎಲ್ಲಕ್ಕೂ ಹೆಚ್ಚಿನ ಧರ್ಮ. ನಿನಗೆ ರಾಜನು ಹೇಗೆ ಪೂಜ್ಯನೋ ಹಾಗೆಯೇ ನಾನು ಪೂಜ್ಯಳು. ನೀನು ನನ್ನನ್ನು ಬಿಟ್ಟು ಹೊರಟುಹೋದರೆ ನಾನು ಜೀವಿಸಲಾ ರೆನು; ಪ್ರಾಣಗಳನ್ನು ಕಳೆದುಕೊಳ್ಳು ವೆನು. ನಿನಗೆ ನಿರಯ ಉಂಟಾಗುವುದು" ಎಂದಳು. ರಾಮನು ಅವಳಿಗೆ, "ತಂದೆಯ ಮಾತನ್ನು ಮೀರುವುದಕ್ಕೆ ನನಗೆ ಶಕ್ತಿಯಿಲ್ಲ. ನನಗೆ ಅಪ್ಪಣೆ ಕೊಡು. ನಾನು ಧರ್ಮ ವೆಂದು ಮಾಡುತ್ತಿರುವುದು ಇದುವರೆಗೆ ಹಿರಿಯರು ಮಾಡಿರತಕ್ಕದ್ದೇ. ತಂದೆ ಕೊಟ್ಟ ಮಾತನ್ನು ನಡೆಸುವುದರಲ್ಲಿ ನಾನು ಹೊಸ ದೇನನ್ನೂ ಮಾಡುತ್ತಿಲ್ಲ. ಇದನ್ನು ಮಾಡು ವುದರಿಂದ ನನಗೆ ಕೆಟ್ಟದಾಗುವುದಿಲ್ಲ" ಎಂದು ಹೇಳಿ, ಲಕ್ಷ್ಮಣನನ್ನು ಕುರಿತು, "ತಮ್ಮ ಲಕ್ಷ್ಮಣ, ನಿನಗೆ ನನ್ನಲ್ಲಿ ಎಷ್ಟು ಸ್ನೇಹವಿದೆಯೆಂದು ನಾನು ಬಲ್ಲೆನು. ನಿನ್ನ ಪರಾಕ್ರಮವೂ ಸತ್ಯವೂ ತೇಜಸ್ಸೂ ದುಸ್ಸ ಹವಾದುವೆಂದು ನನಗೆ ತಿಳಿದಿದೆ. ನಮ್ಮ ತಾಯಿ ಈ ದುಃಖ ಅತುಲವಾದುದೆಂದು ಕೂಡ ನಾನು ಬಲ್ಲೆನು. ಆದರೆ ಅಮ್ಮ. ಎಲ್ಲಕ್ಕಿಂತ ಧರ್ಮವೇ ಹಿರಿದು. ಧರ್ಮದಲ್ಲಿ ಸತ್ಯ ಮುಖ್ಯ. ನಮ್ಮ ತಂದೆಯ ಮಾತು ನಡೆಯುವುದೆನ್ನುವುದು ಈ ಕಾರಣದಿಂದ. ನನಗೆ ಧರ್ಮ ಸಂಶ್ರಿತವಾಗಿದೆ. ಆದು ದರಿಂದ ನೀನು ಈ ನಿನ್ನ ಕ್ಷಾತ್ರಮತಿ ಯನ್ನು ಬಿಡಬೇಕು, ಧರ್ಮವನ್ನು ಹಿಡಿ ಯಬೇಕು." ಎಂದು ಸಮಾಧಾನ ನುಡಿದು ಪುನಃ ಕೌಸಲ್ಯೆಯನ್ನು ಕುರಿತು, "ನನಗೆ ಅಪ್ಪಣೆ ಕೊಡು ತಾಯೆ, ನನ್ನಾಣೆ. ನನಗೆ ಆಶೀರ್ವಾದಮಾಡಿ ನನ್ನನ್ನು ಕಳುಹಿಸಿ ಕೊಡು. ಪ್ರತಿಜ್ಞೆಯನ್ನು ನಡೆಸಿ ನಾನು ಪುನಃ ನಗರಕ್ಕೆ ಬರುತ್ತೇನೆ. ನೀನೂ ನಾನೂ ಲಕ್ಷ್ಮಣನೂ ಸುಮಿತ್ರಾದೇವಿಯೂ ತಂದೆಯ ಅಪ್ಪಣೆಯಂತೆ ನಡೆಯಬೇಕು. ಇದು ಸನಾತನವಾದ ಧರ್ಮ," ಎಂದು ಹೇಳಿದನು. ಕೌಸಲ್ಯೆಗೆ ಈ ಸನಾತ ನವಾದ ಧರ್ಮದ ರಹಸ್ಯ ಮನಹೋಗಲಿಲ್ಲ. "ನಿನಗೆ ತಂದೆ ಹೇಗೋ ಹಾಗೆ ನಾನೂ ಹಿರಿಯಳೇ. ನನ್ನನ್ನು ಬಿಟ್ಟು ನೀನು ವನಕ್ಕೆ ಹೋಗುವುದು ತಕ್ಕದಲ್ಲ. ನಾನು ಅನುಜ್ಞೆ ಯನ್ನು ಕೊಡಲಾರೆನು. ನೀನಿಲ್ಲದೆ ನನಗೆ ಬದುಕಿನಿಂದ ಆಗಬೇಕಾದದೇನು? ನನಗೆ ಎಲ್ಲಕ್ಕಿಂತ ನೀನು ಹೆಚ್ಚು," ಎಂದು ಅವಳು ಮಗನನ್ನು ಮತ್ತೆ ತಡೆದಳು. ಪ್ರಾಯಶಃ ಹೆಂಡತಿ ಗಂಡನಿಗೆ ಹೇಳಬಹುದಾದಂಥ ಮಾತುಗಳನ್ನು ತಾಯಿ ಮಗನಿಗೆ ಹೇಳು



ತ್ತಿದ್ದಳೆಂದು ಇಲ್ಲಿ ನಮಗೆ ತಿಳಿಯಬೇಕು. ರಾಮನು ಲಕ್ಷ್ಮಣನಿಗೆ ಮತ್ತೆ ಹೇಳಿದನು; "ಧರ್ಮವೂ, ಅರ್ಥವೂ, ಕಾಮವೂ ಧರ್ಮದಿಂದಲೇ ದೊರೆಯಬೇಕು. ಮನುಷ್ಯನು ಇವು ಮೂರೂ ಸೇರಿರುವ ಕರ್ಮವನ್ನು ಮಾಡಬೇಕು. ಮೂರು ಸೇರದಿರುವಲ್ಲಿ ಧರ್ಮ ಯಾವುದರಲ್ಲಿದೆಯೋ ಅದನ್ನು ಮಾಡಬೇಕು. ಧರ್ಮ ಇಲ್ಲದೆ ಅರ್ಥ ಇರುವುದನ್ನು ಮಾಡಿದರೆ ಮನುಷ್ಯನು ದ್ವೇಷ್ಯನಾಗುತ್ತಾನೆ. ಧರ್ಮವಿಲ್ಲದೆ ಕಾಮವಿರುವುದನ್ನು ಮಾಡಿದರೆ ಅಯೋಗ್ಯನಾಗುತ್ತಾನೆ. ನಾವೆಲ್ಲ ತಂದೆಯ ಮಾತನ್ನ ನಡೆಸಬೇಕು. ನಮ್ಮ ತಾಯಿಗಾದರೂ ಅವನು ಭರ್ತಾ, ಗತಿ, ಧರ್ಮ. ನಮ್ಮ ತಂದೆ ಅರಸಾಗಿ ಆಳುತ್ತ ಜೀವಂತನಾಗಿರುವಲ್ಲಿ ನಮ್ಮ ತಾಯಿ ವಿಧವೆಯಾದ ಹೆಂಗಸಂತೆ ನನ್ನೊಡನೆ ಬರಬಹುದು ಹೇಗೆ?" ಹೀಗೆಂದು ಅವನು ತಾಯನ್ನು ಕುರಿತು, "ತಾಯಿ, ಅಪ್ಪಣೆ ಕೊಡು. ಬರಿಯ ದೊರೆತನದಷ್ಟಕ್ಕಾಗಿ ಯಶಸ್ಸನ್ನು ತೊರೆಯಬಾರದು. ಜೀವಿತ ದೀರ್ಘವಲ್ಲ. ಅಲ್ಪಮಾನದ ಜೀವನದಲ್ಲಿ ಧರ್ಮವನ್ನು ಬಿಟ್ಟು ಅಲ್ಪವಾದ ದೊರೆತನವನ್ನು ನಾನು ವರಿಸಲಾರೆನು," ಎಂದನು. ಇರುವ ಕೊಂಚ ದಿನದಲ್ಲಿ ಉತ್ತಮವಾದ ಫಲ ಯಾವುದೋ ಅದನ್ನು ಸಾಧಿಸಬೇಕು. ರಾಜ್ಯ, ಧರ್ಮ ಇವುಗಳಲ್ಲಿ ಧರ್ಮ ಹೆಚ್ಚಿನ ಫಲ; ರಾಜ್ಯ ಕಡಮೆಯದು. ಇದು ರಾಮನ ಮನಸ್ಸಿನ ನಿಶ್ಚಯ. ಸೌಮಿತ್ರಿಗೆ ಇನ್ನೂ ಕೋಪ ಇಳಿದಿರಲಿಲ್ಲ; ರಾಮನು ಅವನಿಗೆ ಇನ್ನೂ ಸಮಾಧಾನ ಹೇಳಬೇಕಾಯಿತು. ಅವನು, "ಇದೆಲ್ಲ ದೈವದ ಕರ್ಮ. ಕೈಕೇಯಿಯ ವಿಷಯದಲ್ಲಿ ದ್ವೇಷವನ್ನೆಣಿಸಬೇಡ," ಎಂದನು ಲಕ್ಷ್ಮಣನು, "ವಿಕ್ಲಬನೂ ವೀರ್ಯಹೀನನೂ ಆದವನು ದೈವವನ್ನು ಅನುವರ್ತಿಸಬೇಕು. ಸಂಭಾವಿತಾತ್ಮರಾದ ವೀರರು ದೈವವನ್ನು ಉಪಾಸನೆಮಾಡುವುದಿಲ್ಲ. ಅವರು ತಮ್ಮ ಯತ್ನದಿಂದ ದೈವವನ್ನು ಪ್ರಬಾಧಿಸಬಲ್ಲರು. ಅವರು ದೈವದಿಂದ ಅನರ್ಥ ಒದಗಿದಾಗ ಅದರಿಂದ ಕ್ಲೇಶಪಡುವುದಿಲ್ಲ. ದೈವದಿಂದ ಇದು ಯಾವುದೂ ಆಗಬೇಕಾದುದಿಲ್ಲವೆಂದು ನಾನು ಈಗ ತೋರಿಸಿಯೇನು. ಈ ನನ್ನ ತೋಳುಗಳು ಬರಿಯ ಸೊಗಸಿಗಾಗಿ ಇಲ್ಲ. ಈ ಬಿಲ್ಲನ್ನು ನಾನು ಭೂಷಣಕ್ಕಾಗಿ ಹಿಡಿದಿಲ್ಲ. ಈ ರಾಜ್ಯ ನಿನಗೆ ವಶವಾಗುವ ದಾರಿ ಯಾವುದೋ ಅದನ್ನು ನನಗೆ ಹೇಳು. ಅದನ್ನು ಸಾಧಿಸುವುದರಲ್ಲಿ ನಾನು ನಿನ್ನ ಕಿಂಕರನು," ಎಂದನು. ರಾಮನು ಇಷ್ಟೆಲ್ಲ ಮಾತಿಗೆ ಒಂದೇ ಮಾತಿನಿಂದ ಉತ್ತರ ಹೇಳಿದನು. "ತಮ್ಮ, ನಾನು ತಂದೆಯ ಮಾತಿನ ಅಂಕೆಯಲ್ಲಿ ಇದೇನೆ. ಇದನ್ನು ತಿಳಿ. ಅದೇ ಒಳ್ಳೆಯ ದಾರಿ". ಪಿತೃವಾಕ್ಯ ಪರಿಪಾಲನದಲ್ಲಿ ನಿಶ್ಚಲನಾಗಿದ್ದ ರಾಮನನ್ನು ನೋಡಿ ಕೌಸಲ್ಯೆ, "ಇದುವರೆಗೆ ಕಷ್ಟವನ್ನು ನೋಡದ ನನ್ನ ಮತ್ತು ದಶರಥನ ಕುಮಾರನು ಭಿಕ್ಷದಲ್ಲಿ ಹೇಗೆ ಜೀವಿಸುವುದು? ಯಾವನ ಭೃತ್ಯರೂ ದಾಸರೂ ಮೃಷ್ಟಾನ್ನವನ್ನು ಭುಜಿಸುವರೋ ಅಂಥವನು ವನದಲ್ಲಿ ಫಲಮೂಲಗಳನ್ನು ತಿಂದು ಹೇಗೆ ಜೀವಿಸುವನು? ಮುಖ್ಯ, ಅದೃಷ್ಟದ ಬಲವೇ ಬಲ. ಇಂಥದನ್ನು ಅದು ನಡೆಯಿಸಿಬಿಡುತ್ತದೆ. ಮಗನೇ, ನಾನು ನೀನು ಹೋದಲ್ಲಿಗೆ ಬರುತ್ತೇನೆ," ಎಂದಳು. ರಾಮನು ಅವಳಿಗೆ "ರಾಜನು ಕೈಕೇಯಿಯಿಂದ ವಂಚಿತನಾಗಿದಾನೆ. ನೀನೂ ಅವನನ್ನು ಪರಿತ್ಯಜಿಸಿದರೆ ಅವನು ಬದುಕಿರಲಾರನು. ಭರ್ತೃಪರಿತ್ಯಾಗ ಸ್ತ್ರೀಯರಿಗೆ ತಕ್ಕದಲ್ಲ. ನಮ್ಮ ತಂದೆ ಜೀವಂತನಾಗಿರುವಷ್ಟು ದಿನವೂ ನೀನು ಅವನ ಸೇವೆಯನ್ನು ಮಾಡತಕ್ಕದು. ಇದು ಸನಾತನಧರ್ಮ" ಎಂದು ಅರಿಕೆಮಾಡಿದನು. ಇಷ್ಟು ಮಾತಾದ ಮೇಲೆ ಕೌಸಲ್ಯಾದೇವಿ ಹಾಗೆಯೇ ಆಗಲೆಂದಳು. ರಾಮನು ತಾಯಿಗೆ "ಹದಿನಾಲ್ಕುವರ್ಷದ ದಿನ ವನದಲ್ಲಿ ವಿಹರಿಸಿ ನಾನು ನಿನ್ನ ಆಜ್ಞೆಯನ್ನು ನಡೆಸುವುದಕ್ಕೆ ಸುಖದಿಂದ ಹಿಂತಿರುಗುತ್ತೇನೆ," ಎಂದನು. ತಾಯಿ ಅವನಿಗೆ ಸ್ವಸ್ತ್ಯಯವನನ್ನು ಆಚರಿಸಿದಳು. "ಅರಣ್ಯಕ್ಕೆ ಹೋಗದೆ ಇರಲು ಆಗುವುದಿಲ್ಲ; ಆಗುವುದಿಲ್ಲವಾದರೆ ಹೋಗಿಬಾ. ಆದರೆ ಶೀಘ್ರದಲ್ಲಿ ಹಿಂತಿರುಗು. ಧೃತಿಯಿಂದಲೂ ನಿಯಮದಿಂದಲೂ ನೀನು ಯಾವ ಧರ್ಮವನ್ನು ಪಾಲಿಸುತ್ತೀಯೋ ಅದೇ ಧರ್ಮ ನಿನ್ನನ್ನು ರಕ್ಷಿಸಲಿ. ನೀನು ಚೈತ್ಯ ಆಯತನಗಳಲ್ಲಿ ಯಾವುದಕ್ಕೆ ಪ್ರಣಾಮ ಮಾಡುತ್ತೀಯೋ ಅದು ನಿನ್ನನ್ನು ವನದಲ್ಲಿ ಮಹರ್ಷಿಗಳ ಜೊತೆಗೆ ರಕ್ಷಿಸಲಿ. ಪತಂಗಗಳು, ಪನ್ನಗಗಳು, ಸಿಂಹಗಳು ನಿನ್ನನ್ನು ರಕ್ಷಿಸಲಿ. ಋತುಗಳು ಪಕ್ಷಗಳು ಮಾಸ ಸಂವತ್ಸರಗಳು. ಹಗಲು ಇರುಳುಗಳು, ಘಳಿಗೆ ಮುಹೂರ್ತಗಳು ನಿನಗೆ ಒಳ್ಳೆಯದನ್ನು ಮಾಡಲಿ. ಆಕಾಶ ಅಂತರಿಕ್ಷ, ಪೃಥಿವಿ, ಸಮಸ್ತ ನದಿಗಳು, ನಕ್ಷತ್ರಗಳು, ಸರ್ವ ಗ್ರಹಗಳು, ಎಲ್ಲ ದೇವತೆಗಳು, ಎಲ್ಲ ವೇಳೆಯಲ್ಲಿ ನಿನ್ನನ್ನು ಪಾಲಿಸಲಿ. ರೌದ್ರರೂ ಕ್ರೂರಕರ್ಮಿಗಳೂ ಕ್ರವ್ಯಾದರೂ ಆದ ರಾಕ್ಷಸ ಪಿಶಾಚರಿಂದ ನಿನಗೆ ತೊಂದರೆಯಾಗದಿರಲಿ. ಕೋಡಗ ಚೇಳಿನಿಂದ ಹುಳು ಹುಟ್ಟೆಯಿಂದ ಹಾವು ಹಕ್ಕಿಗಳಿಂದ ನಿನಗೆ ತೊಂದರೆಯಾಗದಿರಲಿ" ಹೀಗೆ ಕೌಸಲ್ಯಾ ದೇವಿ ಮಗನಿಗೆ ರಕ್ಷೆಹಾಕಿ "ಸರ್ವದೇವನಮಸ್ಕೃತನಾದ ಸಹಸ್ರಾಕ್ಷನಿಗೆ ವೃತ್ರನಾಶಕ್ಕೆ ಹೊರಟವೇಳೆ ಯಾವ ಮಂಗಳ ಆಯಿತೋ ಅದು ನಿನಗಾಗಲಿ. ಗರುತ್ಮಂತನಿಗೆ ಅವನು ಅಮೃತ ತರಲು ಹೊರಟವೇಳೆ ವಿನತೆ ಯಾವ ಮಂಗಳವನ್ನು ಮಾಡಿದಳೋ ನಿನಗೆ ಅದೇ ಮಂಗಳವಾಗಲಿ ಅಮೃತೋತ್ಪಾದನ ಕಾಲದಲ್ಲಿ ದೈತ್ಯಘ್ನ ವಜ್ರಧರನಿಗೆ ಅದಿತಿ ಯಾವ ಮಂಗಳವನ್ನು ಮಾಡಿದಳೊ ಅದು ನಿನಗಾಗಲಿ. ಅಮಿತ ತೇಜಸನಾದ ವಿಷ್ಣುವಿಗೆ ತ್ರಿವಿಕ್ರಮ ಪ್ರಕ್ರಮದ ವೇಳೆ ಯಾವ ಮಂಗಳವಾಯಿತೋ ಅದು ನಿನಗಾಗಲಿ," ಎಂದು ಮಂಗಳವನ್ನು ಬಯಸಿ ಅವನ ಮುಂದಲೆಯನ್ನು ಆಘ್ರಾಣಿಸಿ ಅವನನ್ನು ಅಪ್ಪಿಕೊಂಡು, "ಮಗನೆ, ಸುಖವಾಗಿ ಹೋಗಿಬಾ, ನಿನ್ನ ಸಂಕಲ್ಪವನ್ನು ನೆರವೇರಿಸಿ ನೀನು ಅಯೋಧ್ಯೆಗೆ ಹಿಂತಿರುಗಿ ಬರುವುದನ್ನು ನೋಡುತ್ತೇನೆ," ಎಂದಳು. ರಾಮನು ತಾಯಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಸೀತೆಯ ಅನುಮತಿಯನ್ನು ಪಡೆಯುವುದಕ್ಕಾಗಿ ತನ್ನ ಮಂದಿರಕ್ಕೆ ಹೊರಟನು.

★

**ಕಿಶೋರಜಗತ್**

# ಪಾದುಕಾ ಪಟ್ಟಾಭಿಷೇಕ

ಅಯೋಧ್ಯೆಯ ಅರಸನಾದ ದಶರಥನ ಹೆಂಡತಿಯರಿಗೆ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ವರು ಮಕ್ಕಳು. ಯುವಕರಾಗಿ ನಾಲ್ವರಿಗೂ ಮದುವೆಯಾದಮೇಲೆ, ರಾಮನಿಗೆ ಪಟ್ಟಾಭಿಷೇಕ ಮಾಡಬೇಕೆಂದು ದಶರಥನು ತೀರ್ಮಾನಿಸುವನು. ಮಂಥರೆಯ ಕುಟಿಲದಿಂದ, ಕೈಕೇಯಿಯು ತನ್ನ ಮಗ ಭರತನು ರಾಜನಾಗಬೇಕೆಂದೂ, ರಾಜನಾಗಬೇಕಿದ್ದ ರಾಮನು ಹದಿನಾಲ್ಕು ವರ್ಷಗಳ ಕಾಲ ಕಾಡಿಗೆ ಹೋಗಬೇಕೆಂದೂ, ತಾನು ಹಿಂದೆ ದಶರಥನಿಂದ ಪಡೆದ ಎರಡು ವರಗಳನ್ನು ಈಗ ದಶರಥನು ನಡೆಸಿಕೊಡಬೇಕೆಂದು ವಾದಿಸುವಳು. ತಂದೆಯ ಮಾತನ್ನು ಪಾಲಿಸಬೇಕೆಂದು ರಾಮನು ಕಾಡಿಗೆ ಹೊರಡಲು ಸಿದ್ಧನಾದಾಗ, ರಾಮನ ಹೆಂಡತಿ ಸೀತೆಯು ಅವನನ್ನು ಅನುಸರಿಸುವಳು. ರಾಮ ಸೀತೆಯರ ಹಿಂದೆ ಲಕ್ಷ್ಮಣನೂ ಹೊರಡುವನು. ದಶರಥನೂ ಪುರಜನರೂ ಅನಿವಾರ್ಯವಾಗಿ ರಾಮ ಸೀತೆ ಲಕ್ಷ್ಮಣರನ್ನು ಬೀಳ್ಕೊಡುವರು. ದಶರಥನು ಪುತ್ರನ ಮೇಲಿನ ವಾಂಛಲ್ಯವನ್ನು ಮರೆಯಲಾರದೆ ಅದೇ ಕೊರಗಿನಲ್ಲಿ ಸಾವನ್ನಪ್ಪುವನು.

ತಾತನ ಮನೆಯಲ್ಲಿದ್ದ ಭರತನಿಗೆ ಸಮಾಚಾರವು ತಿಳಿದು ಅಯೋಧ್ಯೆಗೆ ಹಿಂತಿರುಗುವನು. ತಂದೆಯ ಅನಿರೀಕ್ಷಿತ ಸಾವಿಗೆ ದುಃಖಿಸುವ ಭರತನು, ತಾಯಿ ಕೈಕೇಯಿಯ ದುರಾಗ್ರಹ ಪೀಡಿತ ಯೋಜನೆಗಳಿಗೆ ಮರುಗುವನು. ಹಿರಿಯ ಮಗನಾದ ರಾಮನಿಗೆ ಸಂಪ್ರದಾಯದಂತೆ ಸಲ್ಲಬೇಕಾದ ರಾಜ್ಯವನ್ನು ತಾನು ಪಡೆಯಲು ಅನರ್ಹನೆಂದು ಪುರಜನರ ಮುಂದೆ ತಿಳಿಸಿ ತಾನು ಈಗಲೇ ಕಾಡಿಗೆ ಹೋಗಿ ಅರಣ್ಯವಾಸಿಯಾದ ರಾಮನನ್ನು ಒಪ್ಪಿಸಿ ಹಿಂದಕ್ಕೆ ಕರೆತರುವೆನೆಂದು ಭರತನು ನುಡಿಯುವನು. ಅವನ ಈ ನಿರ್ಧಾರವನ್ನು ಎಲ್ಲರೂ ಮೆಚ್ಚಿ ಆನಂದಿಸುವರು.

ಭರತನು ಪರಿವಾರ ಸಮೇತನಾಗಿ ರಾಮನನ್ನು ಅರಸುತ್ತ ಹೊರಡುವನು. ಮಾರ್ಗ ಮಧ್ಯದಲ್ಲಿ ಗಂಗೆಯ ತಟದ ಬಳಿ ಬಂದಾಗ ಗುಹನು ಭರತನ ಆಗಮನದ ಬಗ್ಗೆ ಸಂದೇಹವನ್ನು ತಾಳುವನು. ಭರತನು ತಾನು ರಾಮನಿಗೆ ತೊಂದರೆಯನ್ನು ಕೊಡದೆ, ಅವನನ್ನು ರಾಜಧಾನಿಗೆ ಮರಳಿ ಕರೆದೊಯ್ಯಲು ಬರುತ್ತಿರುವುದಾಗಿ ತನ್ನ ಮನದ ಇಂಗಿತವನ್ನು ತಿಳಿಸಿದನು. ಗುಹನು ಸಂತಸದಿಂದ ಅವರನ್ನು ಬರಮಾಡಿಕೊಳ್ಳುವನು. ಅವರಿಗೆ ಯೋಗ್ಯ ರೀತಿಯಲ್ಲಿ ಅತಿಥಿ ಸತ್ಕಾರವನ್ನು ಮಾಡಿ, ಮಾರನೆಯ ದಿನ ರಾಮಲಕ್ಷ್ಮಣ ಸೀತೆಯರು ಹೊರಟ ಹಾದಿಯನ್ನು ತೋರಿಸಿ ನದಿಯನ್ನು ದಾಟಿಸುವನು.

ಎಲ್ಲರೂ ಭರದ್ವಾಜ ಮುನಿಗಳ ಆಶ್ರಮದ ಬಳಿ ಬಂದರು. ಭರತನು ಆಶ್ರಮಕ್ಕೆ ಯೋಗ್ಯವಾದ ಉಡುಪನ್ನು ಧರಿಸಿ ವಸಿಷ್ಠರನ್ನು ಮುಂದು ಮಾಡಿ



ಶ್ರೀಮತಿ ಎಸ್. ವಿ. ಹೇಮಾವತಿ

ಕೊಂಡು ಕುಟೀರವನ್ನು ಪ್ರವೇಶಿಸುವನು. ಭರತನನ್ನು ಕಂಡು ಅವರು 'ರಾಜಕಾರ್ಯ ವನ್ನು ಮಾಡದೆ ನೀನು ಇಲ್ಲಿಗೆ ಬರುವ ಕಾರಣವೇನು?' ಎಂದಾಗ ಭರತನು ತನ್ನ ಮನೋಭಿಲಾಷೆಯನ್ನು ಭರದ್ವಾಜರಿಗೆ ತಿಳಿಸುವನು. ಅವರು ಸಂತೋಷಚಿತ್ತರಾಗಿ ಮಂದಾಕಿನಿ ನದಿಯ ದಕ್ಷಿಣಕ್ಕೆ ಚಿತ್ರಕೂಟ ಪರ್ವತದ ತಪ್ಪಲಿನ ಕಾಡಿನಲ್ಲಿ ರಾಮನ ಪರ್ಣಶಾಲೆಯಿರುವುದೆಂದು ಹೇಳಿ ಕಳುಹಿಸುವರು.

ರಾಮಲಕ್ಷ್ಮಣ ಸೀತೆಯರು ಚಿತ್ರಕೂಟದಲ್ಲಿ ತುಂಬಾ ಆನಂದದಿಂದ ಕಾಲವನ್ನು ಕಳೆಯುತ್ತಿದ್ದರು. ಅವರು ಆ ಮನೋಹರವಾದ ಪ್ರಕೃತಿ ಸೌಂದರ್ಯದ ಸನ್ನಿಧಿಯಲ್ಲಿ ತಮ್ಮವರನ್ನು ಅಗಲಿ ಬಂದ ದುಃಖವನ್ನು ಮರೆತಿದ್ದರು.

ಒಂದು ದಿನ ಇದ್ದಕ್ಕಿದ್ದಂತೆ ಆಕಾಶವೆಲ್ಲಾ ಧೂಳಿ ತುಂಬಿಕೊಂಡು ಹಕ್ಕಿಗಳ ಕಲಕಲ ಶಬ್ದವು ಜೋರಾಗಿ ಕೇಳಬರತೊಡಗಿತು. ರಾಮನು ಅದನ್ನು ಕೇಳಿ ಲಕ್ಷ್ಮಣನಿಗೆ ಏನೆಂದು ನೋಡಲು ತಿಳಿಸುವನು. ಲಕ್ಷ್ಮಣನು ಎತ್ತರವಾದ ಒಂದು ಸಾಲವೃಕ್ಷವನ್ನು ಏರಿ ನಿಂತು ದೂರಕ್ಕೆ ದೃಷ್ಟಿ ಹಾಯಿಸಿದಾಗ ಚತುರಂಗ ಸೈನ್ಯವು ಬರುತ್ತಿರುವುದನ್ನು ಕಂಡ. ಅವನು ಭೀತನಾಗಿ ಸೀತೆಯನ್ನು ಭದ್ರಪಡಿಸುವಂತೆ ತಿಳಿಸಿ ಯುದ್ಧಕ್ಕೆ ಸನ್ನದ್ಧನಾಗಲು ಹೇಳುವನು. ಮತ್ತೊಮ್ಮೆ ಸರಿಯಾಗಿ ನೋಡೆಂದು ರಾಮನು ತಿಳಿಸಿದಾಗ ಲಕ್ಷ್ಮಣನು ನೋಡಿ ಅದು ಭರತನ ಸೈನ್ಯವೆಂದು ತಿಳಿಯಪಡಿಸುವನು.

ರಾಜ್ಯವನ್ನು ಕಬಳಿಸಿದ್ದಷ್ಟೇ ಸಾಲದೆಂಬಂತೆ ನಮ್ಮನ್ನು ಕೊಲ್ಲಲು ಭರತನು ಬರುತ್ತಿರುವನೆಂಬ ಲಕ್ಷ್ಮಣನ ಕೋಪದ ನುಡಿಗಳಿಗೆ ರಾಮನು ತಾಳ್ಮೆಯಿಂದ ಉತ್ತರವನ್ನು ಹೇಳುವನು. 'ಭರತನು ಬಹುಶಃ ತಮ್ಮನ್ನು ಹಿಂದಕ್ಕೆ ಕರೆದೊಯ್ಯಲು ಬರುತ್ತಿರಬಹುದು, ಅವನ ಬಗ್ಗೆ ವೃಥಾ

---

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ಇತರ ತಿರುಪತಿಯ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)
ಬಸ್ ಹೊರಡುವ ಕಾಲ : ಬೆಳಗ್ಗೆ 6–30, ಬೆಳಗ್ಗೆ 10–30, ಸಂಜೆ 4–30
ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

ಅನುಮಾನ ತಾಳುವುದು ಯೋಗ್ಯವಲ್ಲ' ಎಂದು ರಾಮನು ಲಕ್ಷ್ಮಣನಿಗೆ ತಿಳಿಸುವನು.

ಭರತನು ಸೈನ್ಯವನ್ನು ದೂರ ನಿಲ್ಲಿಸಿ ತಾನು ಮುಂದುವರಿದು ಕೌಸಲ್ಯೆ, ಸುಮಿತ್ರೆ, ಕೈಕೇಯಿ ಹಾಗೂ ವಸಿಷ್ಠ, ಸುಮಂತ್ರ ಮೊದಲಾದವರೊಂದಿಗೆ ಪರ್ಣಕುಟೀರದ ಬಳಿ ಬಂದನು. ಅಲ್ಲಿ ಹುಲ್ಲಿನ ನೆಲದ ಮೇಲೆ ಕುಳಿತಿದ್ದ ರಾಮನನ್ನು ನೋಡಿ 'ಅಣ್ಣ' ಎಂದು ಕೂಗಿಕೊಂಡು ಅವನ ಕಾಲಡಿಯಲ್ಲಿ ಬೀಳುವನು. ಇಬ್ಬರೂ ಗದ್ಗದಿತರಾಗಿ ಒಬ್ಬರನ್ನೊಬ್ಬರು ಅಪ್ಪಿಕೊಳ್ಳುವರು. ರಾಮನು ಭರತನನ್ನು ಬಂದ ಕಾರಣವೇನೆಂದು ಕೇಳುವನು. ಭರತನು ದಶರಥನ ಮರಣವನ್ನು ತಿಳಿಸುವನು. 'ಅನಾಥವಾಗಿರುವ ರಾಜ್ಯವನ್ನು ನೀನೇ ಪಾಲಿಸಬೇಕೆ'ಂದು ಬೇಡುವನು. 'ಸಿಂಹಾಸನವನ್ನೇರಿ ರಾಜ್ಯಭಾರ ಮಾಡಬೇಕಾದ ಹಿರಿಯನು ನೀನಿರುವಾಗ ನಿನ್ನನ್ನು ಬಿಟ್ಟು ನಾನು ರಾಜ್ಯನಾಗಲಾರೆ. ನೀನು ಹಿಂತಿರುಗಿ ಬರಲೇಬೇಕೆ'ಂದು ಮೊರೆಯಿಡುವನು. ಆಗ ಶ್ರೀರಾಮನು ಭರತನಿಗೆ ರಾಜನೀತಿಯನ್ನು ವಿಷದವಾಗಿ ತಿಳಿಸುತ್ತ 'ನಾನು ಪಿತೃವಾಕ್ಯ ಪರಿಪಾಲನೆಗಾಗಿ ವನದಲ್ಲಿರಬೇಕಾಗುವುದು ಧರ್ಮವೇ ಸರಿ. ನೀನೇ ರಾಜ್ಯವನ್ನಾಳು' ಎಂದು ಪರಿಪರಿಯಾಗಿ ತಿಳಿಸುವನು. ಭರತನು ರಾಮನು ಅಯೋಧ್ಯೆಗೆ ಹಿಂತಿರುಗಲೆಂದೇ ಒತ್ತಾಯ ಮಾಡುವನು. ಆಗ ಪುರೋಹಿತರ ಗುಂಪಿನಿಂದ ಮಹಾಪ್ರಾಜ್ಞರಾದ ಜಾಬಾಲರು ಎದ್ದು ಬಂದು ರಾಮನಿಗೆ ಅಯೋಧ್ಯೆಗೆ ತೆರಳಲು ಉಪದೇಶಿಸುವರು.

ವಸಿಷ್ಠರು ಜಾಬಾಲಿ ಋಷಿಗಳ ಮಾತನ್ನು ಅನುಮೋದಿಸುತ್ತ 'ಒಂದು ಕಡೆ ಕರ್ತವ್ಯ, ಮತ್ತೊಂಡೆಡೆ ತಂದೆಯ ಆಜ್ಞೆ ಎರಡೂ ದೊಡ್ಡದೇ, ಆದರೂ ಅಪವಾದಕ್ಕೆ ಸಿಕ್ಕಿರುವ ಭರತನು ನಿಂದನೆಗೆ ಅಂಜಿ ನಿನ್ನಲ್ಲಿ ಶರಣಾರ್ಥಿಯಾಗಿ ಬಂದಿರುವನು. ಅವನನ್ನು ಕೈಬಿಡುವುದು ಉಚಿತವಲ್ಲ ಅವನ ಮಾತನ್ನು ನಡೆಸಿ ಕೊಡು' ಎಂದು ರಾಮನಿಗೆ ತಿಳಿಸುವರು.

ಇಷ್ಟಾದರೂ ರಾಮನು ಸಮ್ಮತಿಸದಿದ್ದಾಗ ಭರತನು ಸುಮಂತ್ರನನ್ನು ಕಂಡು "ದರ್ಭೆಯನ್ನು ತಂದು ಹರಡಿರಿ. ನಾನು ಇಲ್ಲಿಯೇ ಉಪವಾಸ ಮಾಡಿ ಪ್ರಾಣತ್ಯಾಗ ಮಾಡುವೆ" ಎಂದನು.

ಆಗ ರಾಮನು ಭರತನನ್ನು ಸಾಂತ್ವನಗೊಳಿಸುತ್ತ 'ಅಯೋಧ್ಯೆಗೆ ಹಿಂತಿರುಗಿ ನಿನ್ನ ಕರ್ತವ್ಯವನ್ನು ನೀನು ಮಾಡು, ಕ್ಷತ್ರಿಯ ಧರ್ಮಕ್ಕೆ ವಿರೋಧವಾಗಿ ಕೆಲಸ ಮಾಡುವುದು ಯುಕ್ತವಲ್ಲ' ಎನ್ನುವನು. ನಂತರ ಭರತನ ಹಿಂದೆ ಬಂದಿದ್ದ ಪುರಜನರೂ, 'ಶ್ರೀ ರಾಮಚಂದ್ರನು ಸತ್ಯದ ಹಾದಿಯನ್ನು ಬಿಟ್ಟು ಎಂದೂ ಬರಲಾರನು. ಪಿತೃವಾಕ್ಯ ಪರಿಪಾಲನೆಗಾಗಿ ಈ ವನವಾಸಕ್ಕೆ ಬಂದಿರುವನು. ಅವನನ್ನು ಅಯೋಧ್ಯೆಗೆ ಬರಬೇಕೆಂದು ಒತ್ತಾಯ ಪಡಿಸುವುದರಲ್ಲಿ ಅರ್ಥವಿಲ್ಲ. ವ್ಯರ್ಥಾಲಾಪ ಮಾಡದೆ ಹಿಂತಿರುಗೋಣ'ವೆನ್ನುವರು. ಶ್ರೀರಾಮನು ಪುರಜನರ ಮಾತುಗಳನ್ನು ಮೆಚ್ಚಿಕೊಳ್ಳುವನು.

ಪುನಃ ಭರತನು, ರಾಮನಿಗೆ "ನಿನ್ನ ಬದಲು ನಾನೇ ವನವಾಸ ಮಾಡುವೆ" ಎಂದಾಗ ರಾಮನು 'ನನಗೆ ಶಕ್ತಿಯಿದೆ ನಾನೇ ಮಾಡುವೆನು' ಎಂದು ಅದನ್ನೂ ಒಪ್ಪದೆ ಹೋಗುವನು. ಆಗ ವಸಿಷ್ಠರು ಭರತನಿಗೆ "ರಾಮನ ಅಧಿಕಾರವನ್ನು ಪಡೆದು, ಅವನ ಪರವಾಗಿ ನೀನು ರಾಜ್ಯಾಡಳಿತವನ್ನು ನಡೆಸು ಇದರಿಂದ ಯಾವ ದೋಷವೂ ಇಲ್ಲ. ಇಬ್ಬರೂ ಕರ್ತವ್ಯವನ್ನು ಪಾಲಿಸಿದಂತಾಗುವುದು" ಎಂದು ಅವರೀರ್ವರ ಧರ್ಮಗಳಿಗೂ ಸಹಜವಾದ ಒಂದು ದಾರಿಯನ್ನು ತೋರುವರು.

ಭರತನು ರಾಮನನ್ನೇ ತಂದೆಯೆಂದು ತಿಳಿದು ಅವನ ಪಾದುಕೆಗಳನ್ನು ಅವನ ಪ್ರತಿನಿಧಿಯೆಂದು ಸ್ವೀಕರಿಸುವನು. ಹದಿನಾಲ್ಕು ವರ್ಷ ಮುಗಿಯುವವರೆಗೂ ತಾನು ರಾಜ್ಯ ಪರಿಪಾಲನೆ ಮಾಡುವೆನೆಂದೂ ನಂತರ ರಾಮನು ಬಂದು ಅವನ್ನು ಸ್ವೀಕರಿಸಬೇಕೆಂದು ಭರತನು ರಾಮನಲ್ಲಿ ವಿನಂತಿಸಿಕೊಳ್ಳುವನು.

ರಾಮನ ಪಾದುಕೆಗಳನ್ನು ಶಿರದ ಮೇಲೆ ಹೊತ್ತು ಭರತನು ಪರಿವಾರದೊಂದಿಗೆ ಹಿಂದಕ್ಕೆ ತೆರಳುವನು. ನಂದಿಗ್ರಾಮದಲ್ಲಿದ್ದುಕೊಂಡು ರಾಜ್ಯಭಾರ ಮಾಡಬೇಕೆಂದು ತೀರ್ಮಾನಿಸಿ ಮಹಾಜನರನ್ನು ಬರಮಾಡಿಕೊಂಡು "ಅಣ್ಣನ ಬದಲು ಅಣ್ಣನ ಪಾದುಕೆಗಳೇ ಈಗ ಪ್ರಭುಗಳು. ನಾನು ಅವರ ದಾಸನಾಗಿ ರಾಜಾಧಿಪತ್ಯವನ್ನು ವಹಿಸುವೆ" ಎಂದು ಅವರ ಮುಂದೆ ಬಿನ್ನವಿಸಿಕೊಳ್ಳುವನು. ಭರತನು ರಾಮಲಕ್ಷ್ಮಣರು ಹಿಂತಿರುಗುವವರೆಗೂ ಅದನ್ನು ಒಂದು ತಪಸ್ಸೆಂದು ಭಾವಿಸಿ ತನ್ನ ಕರ್ತವ್ಯವನ್ನು ನಿರ್ವಹಿಸಿ ಲೋಕಮಾನ್ಯನಾಗುವನು. ಹೀಗೆ ಭರತನು ನಿಸ್ವಾರ್ಥದಿಂದ ಭಗವಂತನ ಚರಣಗಳಲ್ಲಿ ತನ್ನನ್ನು ಸಮರ್ಪಿಸಿಕೊಂಡು ರಾಜ್ಯವನ್ನಾಳಿ ಭಾತೃಪ್ರೇಮದ ಪ್ರತೀಕವಾಗಿದ್ದಾನೆ.

---



ಮಾರಾಟಕ್ಕೆ ಸಿದ್ಧವಾಗಿವೆ

ತಾಮ್ರ ಚಿತ್ರಪಟಗಳು

ಶ್ರೀ ವೆಂಕಟೇಶ್ವರಸ್ವಾಮಿ

ಹಾಗೂ

ಶ್ರೀ ಪದ್ಮಾವತೀ ಅಮ್ಮನವರ

ಆಕರ್ಷಕ ತಾಮ್ರಚಿತ್ರಗಳ ಫಲಕಗಳು

ಸುಲಭ ಬೆಲೆಯಲ್ಲಿ ದೀರ್ಘಕಾಲ

ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು

**ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ**

**ದೊರೆಯುತ್ತವೆ.**

# ಮಹಾಕವಿ ವಾಲ್ಮೀಕಿ

ಕೂಜನ್ತಂ ರಾಮ ರಾಮೇತಿ
ಮಧುರಂ ಮಧುರಾಕ್ಷರಂ ।
ಆರುಹ್ಯ ಕವಿತಾ ಶಾಖಾಂ
ವಂದೇ ವಾಲ್ಮೀಕಿ ಕೋಕಿಲಂ ।

“ಕವಿತಾ ಶಾಖೆಯ ತುತ್ತ ತುದಿಯಲ್ಲಿ ಕುಳಿತು ಎಡಬಿಡದೆ ರಾಮ ರಾಮ ಎಂಬ ಮಧುರಾಕ್ಷರವನ್ನು ಉಲಿಯುವ ವಾಲ್ಮೀಕಿ ಕೋಗಿಲೆಗೆ ನಮಸ್ಕರಿಸುತ್ತೇವೆ”. ಹೀಗೆಂದು ಭರತ ಖಡದ ಆದಿ ಕವಿ ಎನಿಸಿದ ವಾಲ್ಮೀಕಿಯನ್ನು ಕುರಿತು, ಹಿರಿಯ ಕವಿಗಳಿಂದ ಹಿಡಿದು ಕಿರಿಯ ಕವಿಗಳ ತನಕ ಸ್ತುತಿಸಿದ್ದಾರೆ. ಕಾರಣ ಆತ ಈ ಭರತಖಂಡವನ್ನು ರಾಮಾಯಣವೆಂಬ ಕಾವ್ಯಾಮೃತದಿಂದ ಅಭಿಷೇಚಿಸಿದ ಮಹಾ ಪುರೋಹಿತ, ಅಸಂಖ್ಯಾತ ಕವಿಗಳ ಹೃದಯ ವೀಣೆಯನ್ನು ಮಿಡಿದ ರಸಸಿದ್ಧ ವೈಣಿಕ. ಪಾವನವಾದ ರಾಮಾಯಣವೆಂಬ ಪುಣ್ಯನದಿಗೆ ಜನ್ಮವಿತ್ತ ಮೇರುಪರ್ವತ. ತಾರಕನಾಮನೆನಿಸಿದ ಶ್ರೀರಾಮನ ಚರಿತಾಮೃತವಾದ ಮತ್ತು ಹಿಂದೂ ಧರ್ಮದ ಪವಿತ್ರ ಕೃತಿಯಾದ ಮಹಾನ್ ಕಾವ್ಯಕ್ಕೆ ವಿಶ್ವವೇ ತಲೆಬಾಗಿ ಗೌರವಿಸುವಂತೆ ಮಾಡಿದ ಮಹಾನ್ ದಾರ್ಶನಿಕ. ಧರ್ಮಪ್ರಿಯರ ಕಲ್ಪವೃಕ್ಷ. ಭರತ ಖಂಡದ ಭಾಗ್ಯವಿಧಾತ.



ಈತನ ಜನ್ಮ ವೃತ್ತಾಂತದ ಬಗ್ಗೆ ಹತ್ತಾರು ಕಾವ್ಯಗಳು, ಹತ್ತಾರು ಕತೆಗಳನ್ನು ಹೇಳುತ್ತವೆ. ಈ ಹುಟ್ಟಿನಿಂದ 'ಬ್ರಾಹ್ಮಣ'. ಕಿರಾತರ ನಡುವೆ ಬೆಳೆದು ಬೇಡನಾದ ಎಂದು ಒಂದು ಕೃತಿ ಹೇಳಿದರೆ, ಅಶ್ವಘೋಷನು ತನ್ನ ಬುದ್ಧ ಚರಿತೆಯಲ್ಲಿ ವಾಲ್ಮೀಕಿ ಚ್ಯವನ ಮಹರ್ಷಿಯ ಮಗನೆಂದು ಹೇಳಿದ್ದಾನೆ. ಮಹಾಭಾರತದ ವ್ಯಾಸಮುನಿಯ ಪ್ರಕಾರ ಭಾರ್ಗವನೇ ವಾಲ್ಮೀಕಿ. ಹೀಗೆ ಇನ್ನು ಕೆಲವರ ಪ್ರಕಾರ ವಾಲ್ಮೀಕಿ ಜನ್ಮತಃ ಬ್ರಾಹ್ಮಣ. ಆದರೆ ಜನಮನದಲ್ಲಿ ಬೇರೂರಿರುವ ಕತೆಯೇ ಬೇರೆ. ಆ ಪ್ರಕಾರ ಆತನು ಹುಟ್ಟಿನಿಂದ ಓರ್ವ ಬೇಡ. ತಲೆ ಬಡಿದು ತಿನ್ನುವುದೇ ಅವನ ದಿನನಿತ್ಯ ಕಾಯಕ. ನಾರದ ಮಹರ್ಷಿಗಳ ಪ್ರಭಾವದಿಂದ ಅವನಿಗೆ ವೈರಾಗ್ಯ ಉದಯವಾಯ್ತು. 'ಮರಾ' ಎಂದು ಹೇಳುತ್ತಾ ಧ್ಯಾನಾಸಕ್ತನಾದ. ಮೈಮೇಲೆ ಹುತ್ತ ಬೆಳೆಯಿತು. ಈ ವೇಳೆಗೆ ಆತ 'ಅನ್ನಮಯಕೋಶ'ದಿಂದ 'ಪ್ರಾಣಮಯ' ಮುಟ್ಟಿ ಹಂತಹಂತವಾಗಿ 'ಮನೋಮಯ'ದಿಂದ 'ಆನಂದಮಯ' ಮುಟ್ಟಿದ. ಜ್ಞಾನೋದಯವಾಯಿತು. ವಲ್ಮೀಕದಿಂದ ಹೊರಬಂದು ವಾಲ್ಮೀಕಿಯಾದ. ಈ ಕತೆಯನ್ನ ಕೆಲವರು ಪ್ರಕ್ಷಿಪ್ತವೆಂದು ವಾದಿಸುತ್ತಾರೆ. ಆದರೆ ರಾಮಾಯಣ ಪಾರಾಯಣ ಮಾಡುವ ಜನರ ಹೃನ್ಮನಗಳಲ್ಲಿ ಆತ ಬೇಡನೇ ಎಂಬ ಕತೆ ಆಳವಾಗಿ ಬೇರೂರಿಬಿಟ್ಟಿದೆ ಕೆಲವು ಆಧಾರಗಳಿಂದ ಈ ಕತೆ ಸತ್ಯವೇ ಎನಿಸುತ್ತದೆ.



ವಾಲ್ಮೀಕಿ ಕಾಲದ ವಿಷಯವೂ ವಾದಗ್ರಸ್ತವಾದ ವಿಚಾರವಾಗಿದೆ. ಕೃತಿಯ

“ಕವಿತಾಕೃಷ್ಣ”

ಭಾಷಾಲಕ್ಷಣ ಹಾಗು ವೈವಿಧ್ಯತೆಗಳನ್ನು ಗುರುತಿಸಿದ ವಿದ್ವಾಂಸರು ಕ್ರಿ.ಪೂ. ೩ನೆಯ ಶತಮಾನದಿಂದ ಅನೇಕ ಶತಮಾನದ ವರೆಗೂ ಕೊಂಡೊಯ್ಯುತ್ತಾರೆ ಆದರೆ ರಾಮಾಯಣದ ಆದಿ ಅಂತ್ಯ ಕಾಂಡಗಳಲ್ಲಿ ಈತನ ವೃತ್ತಾಂತ ಬರುತ್ತದೆ. ಸೀತೆಗೆ ಆಶ್ರಯವಿತ್ತವನೂ, ಲವ – ಕುಶರನ್ನು ಪೋಷಿಸಿದವನೂ ಸಹ ಈತನೆ.

ಭಾರತದ ಆದಿಕಾವ್ಯ ರಾಮಾಯಣ. ಇದು ವಾಲ್ಮೀಕಿಯಿಂದ ಹೇಗೆ ಸೃಷ್ಟಿಗೊಂಡಿತು, ಎಂಬುದಕ್ಕೆ ಶ್ರೀಮದ್ರಾಮಾಯಣದ ಬಾಲ ಕಾಂಡ ಹೀಗೆ ಹೇಳುತ್ತದೆ:

ವಾಲ್ಮೀಕಿ ಒಂದು ದಿನ ತನ್ನಾಪ್ತ ಶಿಷ್ಯ ಭರದ್ವಾಜನೊಡನೆ ಸ್ನಾನಕ್ಕೆ ತೆರಳಿದ್ದಾನೆ. ತಮಸಾನದಿಯ ಸ್ನಾನಘಟ್ಟಕ್ಕೆ ಸಿಗುತ್ತಲೇ ಋಷಿ ನಿರ್ಮಲ ಸಲಿಲದ ರಮಣೀಯತೆಗೆ ಮಾರು ಹೋಗಿದ್ದಾನೆ. ಕಲಶ, ನಾರುಡಿಗೆ ಹಿಡಿದು ಯಾಂತ್ರಿಕವಾಗಿ ನೀರಿಗಿಳಿಯುತ್ತಿದ್ದಾನೆ. ಅವನ ದೃಷ್ಟಿ ಇದ್ದಕಿದ್ದಂತೆ ಆನಂದದಿಂದ ಉಲಿಯುತ್ತಿರುವ ಕ್ರೌಂಚಪಕ್ಷಿಗಳತ್ತ ಬೀಳುತ್ತದೆ. ಜೋಡಿ ಜೀವಗಳ ಲಾಸ್ಯವನ್ನು ನೋಡುತ್ತಾ ಮೈಮರೆತಿದ್ದಾನೆ. ಇದ್ದಕಿದ್ದಂತೆ ನಿಷಾದ ಸೂಡಿದ ಬಾಣವೊಂದು ಬಂದು ಗಂಡು ಹಕ್ಕಿಗೆ ನಾಟುತ್ತದೆ. ನೆತ್ತರು ಚಿಲ್ಲೆಂದು ಉಕ್ಕುತ್ತದೆ. ಆಘಾತಕ್ಕೆ ಸಿಲುಕಿದ ಗಂಡು ನೆಲಕ್ಕುರುಳಿ ವಿಲವಿಲನೆ ಒದ್ದಾಡುತ್ತದೆ. ರಕ್ತದಲ್ಲಿ ನೆನೆದು ಕಣ್ಮುಚ್ಚಲಿರುವ ಗಂಡು ಹಕ್ಕಿಯ ಸ್ಥಿತಿಕಂಡು ಹೆಣ್ಣುಹಕ್ಕಿ ಕರುಳು ಕರಗುವಂತೆ ಆರ್ತನಾದ ಮಾಡುತ್ತದೆ. ತದೇಕಚಿತ್ತನಾಗಿ ನೋಡಿದ ಋಷಿಯ ಮನ ಮರುಕಗೊಳ್ಳುತ್ತದೆ, ಅವನಿಗರಿವಿಲ್ಲದಂತೆ ಅವನ ಬಾಯಿಂದ ಶ್ಲೋಕವೊಂದು ಹೊರಹೊಮ್ಮುತ್ತದೆ;

" ಮಾ ನಿಷಾದ ಪ್ರತಿಷ್ಠಾಂ
ತ್ವಮಗಮಃ ಶಾಶ್ವತೀಃ ಸಮಾಃ ।
ಯತ್ಕ್ರೌಂಚ ಮಿಥುನಾದೇಕಂ
ಅವಧೀಃ ಕಾಮ ಮೋಹಿತಮ್ ॥"

ಅಯ್ಯೋ ಬೇಡನೇ, ಅನುರಾಗದಿಂದೊಡಗೂಡಿ ಮೈಮರೆದು ಹಾಡುತ್ತಿದ್ದ ಕ್ರೌಂಚ ಪಕ್ಷಿಗಳಲ್ಲಿ ಒಂದನ್ನು ವಿನಾಕಾರಣ ಕೊಂದೆಯಾ ? ಎಂಬ ವಾಣಿಯು ಋಷಿಗರಿವಿಲ್ಲದಂತೆ ಪ್ರಾಸಲಯ ಬದ್ಧವಾಗಿ, ಅಕ್ಷರಗಳು ಸಮನಾಗಿ, ಶೋಕವೇ ಶ್ಲೋಕವಾಗಿ ಹೊರಬಂದಿತು. ವೇದೋಪನಿಷತ್ತುಗಳಲ್ಲಿ ಇಲ್ಲದ ಛಂದಸ್ಸೊಂದು ( ವೈದಿಕ )ಮೊದಲ ಬಾರಿಗೆ ತಾನಾಗಿ ಹುಟ್ಟಿತು !

ವಾಲ್ಮೀಕಿ ಬೇಡನಿಗಿತ್ತ ಶಾಪದಿಂದ, ಹಕ್ಕಿಯ ಮರಣದಿಂದ ಬೇಸರಗೊಂಡು ಬರುತ್ತಿದ್ದರ ಏನಿದು ನನಗರಿವಿಲ್ಲದೆಯೆ ಕವಿತೆ ಹುಟ್ಟಿತಲ್ಲಾ !? ಹಾಡಲು ಎಷ್ಟು ಮನೋಹರವಾಗಿದೆ ! ? ಎಂಬ ಆಶ್ಚರ್ಯವೂ ಆಯಿತು. ಮುನಿ ಕುಟೀರವನ್ನು ತಲುಪುತ್ತಿದ್ದಂತೆ ಬ್ರಹ್ಮದೇವನು ಪ್ರತ್ಯಕ್ಷನಾಗಿ 'ನನ್ನ ಪ್ರೇರಣೆಯಿಂದಲೇ ನಿನ್ನ ಬಾಯಲ್ಲಿ ಹೀಗೆ ಬಂದಿತು. ನೀನು ರಚಿಸಿರುವುದು ಶ್ಲೋಕವೇ ಸರಿ, ಸಂದೇಹ ಬೇಡ' ಎಂದು ಹೇಳಿ, 'ಪುರುಷೋತ್ತಮನಾದ ಶ್ರೀರಾಮನ ಕತೆಯನ್ನು ಬರೆ, ಎಲ್ಲಿಯತನಕ ಈ ಧರೆಯ ಮೇಲೆ ಗಿರಿ ಪರ್ವತಗಳೂ ಇರುತ್ತವೆಯೋ ಅಲ್ಲಿಯ ತನಕ ರಾಮಾಯಣ ಕತೆಯು ಪ್ರಚಾರಗೊಳ್ಳಲಿ' ಎಂದು ಹರಸಿ ಅಂತರ್ಧಾನನಾದ. ಬ್ರಹ್ಮನವಾಣಿ ಸತ್ಯಸ್ಯ ಸತ್ಯವಾಯಿತು.

ವಾಲ್ಮೀಕಿ ಶ್ರೀರಾಮನನ್ನು ಕುರಿತು ಶ್ರೀಮದ್ರಾಮಾಯಣವೆಂಬ ಹೆಸರಿನಿಂದ ಮಹಾಕಾವ್ಯವನ್ನು ರಚಿಸಿದಂದಿನಿಂದ ಇಂದಿನವರೆವಿಗೂ ನಾನಾ ಪಾತ್ರಗಳಲ್ಲಿ ರೂಪಗೊಂಡು ವಿಶ್ವವ್ಯಾಪಿಯಾಯಿತು. ಕವಿಯ ಕಥನ ಶೈಲಿಗೆ ಜನತೆ ಮಾರುಹೋಯಿತು. ನಾನಾ ಭಾಷೆಯ, ನಾನಾ ಧರ್ಮಗಳ ಕವಿಗಳು ವಾಲ್ಮೀಕಿ ವಚನಾಮೃತ ಸಾಗರದಲ್ಲಿ ಈಜಿದರು. ಕೈಲಾದಮಟ್ಟಿಗೆ ಅನರ್ಘ್ಯ ರತ್ನಗಳನ್ನು ಆರಿಸಿಕೊಂಡರು. ಸ್ಫೂರ್ತಿ ಉಕ್ಕಿತು. ಆದಿಕಾವ್ಯವನ್ನು ಆಧಾರವಾಗಿರಿಸಿಕೊಂಡು ಕೃತಿರಚನೆಗೆ ತೊಡಗಿದರು. ಅವರ ಶ್ರಮದಿಂದ ಬೌದ್ಧರಾಮಾಯಣ, ವಾಸಿಷ್ಠ ರಾಮಾಯಣ, ಆನಂದ ರಾಮಾಯಣ, ಅಧ್ಯಾತ್ಮ ರಾಮಾಯಣ, ಕಂಬ ರಾಮಾಯಣ, ಯೋಗ ರಾಮಾಯಣ, ಕುಮುದೇಂದು ರಾಮಾಯಣ, ಪಂಪ ರಾಮಾಯಣ, ಜಾನಪದ ರಾಮಾಯಣ, ಲಂಕಾ ರಾಮಾಯಣ, ದಶಕಂಠ ಮತ್ತು ಶತಕಂಠ ರಾಮಾಯಣ, ರಾಮಾಯಣ ದರ್ಶನಂ ಮುಂತಾದ ಮಹಾ ಕಾವ್ಯಗಳೆಲ್ಲಾ ಮೂರ್ತಿವೆತ್ತು ಮೆರೆದಿವೆ. ಭಾರತೀಯರು ಈ ಕಾವ್ಯಗಳೆನ್ನೆಲ್ಲಾ ಪುರಸ್ಕರಿಸಿ ಯಥಾಶಕ್ತಿ

(28 ನೇ ಪುಟ ನೋಡಿ)

(1ನೇ ಪುಟದಿಂದ)

ನ್ನುಂಟು ಮಾಡಿ ಹೋಗಿದ್ದಾನೆ. ಸೀತೆಯಾದರೋ ಬದುಕಿನಲ್ಲಿ ನಿರಾಶೆಗೊಂಡು ಸಾಯಲು ಸಿದ್ಧಳಾಗಿದ್ದಾಳೆ. ಆಗ ಆವಳಿಗೆ ಶುಭ ಶಕುನಗಳಾಗಿ ಕಪಿರೂಪದಲ್ಲಿ ಶಿಂಶುಪಾ ವೃಕ್ಷದ ಮೇಲೆ ಕುಳಿತು ಸೀತೆಗೆ ರಾಮಕಥೆಯನ್ನು ಕೇಳಿಸಿ ಕುತೂಹಲ ಪಡಿಸಿದ ಆಂಜನೇಯನನ್ನು ಆಕೆ ನೋಡಿದಳು ಬಗೆ.

ನಿಶಮ್ಯ ಸೀತಾವಚನಂ ಕಪೀಶ್ಚ
ವಿಶಶ್ಚ ಸರ್ವಾಃ ಪ್ರದಿಶಶ್ಚವೀಕ್ಷ್ಯ ।
ಸ್ವಯಂ ಪ್ರಹರ್ಷಂ ಪರಮಂ ಜಗಾಮ
ಸರ್ವಾತ್ಮನಾ ರಾಮಮನುಸ್ಮರಂಶ್ಚ ।

ಶಾಖಿರ್ಭಾಗೂರ್ಧ್ವಗಂ ಚ ತಥಾಪ್ಯಧಸ್ತಾತ್
ನಿರೀಕ್ಷಮಾಣಾ ತಮಚಿಂತ್ಯಬುದ್ಧಿಃ ।
ದದರ್ಶ ಪಿಂಗಾಧಿಪತೇರಮಾತ್ಯಂ
ವಾತಾತ್ಮಜಂ ಸೂರ್ಯಮಿವೋದಯಸ್ಥಂ ॥

ಕತ್ತಲೆಯನ್ನು ಹೋಗಲಾಡಿಸುವ ಬಾಲಸೂರ್ಯನಂತೆ ವಾಗ್ರೂಪದ ಮೃತಸಂಜೀವಿನಿಯನ್ನು ತಂದ ಆಪತ್ತಿಗೆ ಸರಿಯಾಗಿ ಒದಗಿಬಂದ ಮಾರುತಿಯ ಬಗ್ಗೆ ಸೀತೆಗೆ ತುಂಬಾ ವಿಶ್ವಾಸ ಗೌರವ ಬೆಳೆಯಿತು. ಅವಳ ಪ್ರಾಣಉಳಿಯಿತು.

ಇದೇ ಆಂಜನೇಯ ಅಶೋಕವನವನ್ನು ಹಾಳುಗೆಡವಿ ರಾಕ್ಷಸರನ್ನು ಘಾತಿಸಿ ತನ್ನನ್ನು ತಾನೇ ಉದ್ಘೋಷಿಸಿದ ಬಗೆ.

ಜಯತ್ಯತಿ ಬಲೋ ರಾಮೋ
ಲಕ್ಷ್ಮಣಶ್ಚ ಮಹಾಬಲಃ ।
ರಾಜಾ ಜಯತಿ ಸುಗ್ರೀವೋ
ರಾಘವೇಣಾಭಿ ಪಾಲಿತಃ ॥

ದಾಸೋಽಹಂ ಕೋಸಲೇಂದ್ರಸ್ಯ
ರಾಮಸ್ಯಾಕ್ಲಿಷ್ಟ ಕರ್ಮಣಃ ।
ಹನುಮಾನ್ ಶತ್ರುಸೈನ್ಯಾನಾಂ
ನಿಹಂತಾ ಮಾರುತಾತ್ಮಜಃ ॥

ಆಂಜನೇಯನ ಜಯಘೋಷವನ್ನು, ಅವನು ರಾಕ್ಷಸರನ್ನು ಸದೆಬಡಿಯುತ್ತಿರುವ ರೀತಿಯನ್ನೂ ಗಮನಿಸಿದ ರಾಕ್ಷಸರ್ಷ ರಾಜನಾದ ರಾವಣನಿಗೆ ಆವನನ್ನು ಸ್ವತಃ ಕಾಣುವುದಕ್ಕೆ ಮೊದಲೇ, ಪಂಚಸೇನಾಗ್ರನಾಯಕನನ್ನು ಯುದ್ಧಕ್ಕೆ ಕಳುಹುವಾಗ ಕಳವಳಯುಕ್ತನಾಗುವನು.

ದುಷ್ಟರಿಗೂ ಶಿಷ್ಟರಿಗೂ ವಿಧ ವಿಧವಾಗಿ ಕಾಣಿಸಿಕೊಂಡು ಭಯಪ್ರದನೂ ಭಯನಾಶಕನೂ ಆದ ಆಂಜನೇಯನ ಪಾತ್ರ ಶ್ರೀಮದ್ರಾಮಾಯಣದಲ್ಲಿ ಬಲು ದೊಡ್ಡದು. ಅವನು ತನ್ನ ರಾಜ ಸುಗ್ರೀವನಿಗಿಂತ ದೊಡ್ಡವನು. ಆದರೆ ಹಾಗೆ ಎಂದೂ ಹೇಳಿಕೊಂಡವನಲ್ಲ. ಅಲ್ಪರಲ್ಲಿ ಅಲ್ಪನಾಗಿ ಎಲ್ಲರಲ್ಲೂ ಸಮಾನನಾಗಿ ಬೆರೆತು, ಎಲ್ಲರಿಂದಲೂ ಪೂಜಿಸಲ್ಪಟ್ಟು ಅವನು ಹೆಸರುವಾಸಿಯಾದ. ಅವನ ಪಾತ್ರದ ಹಿರಿಮೆಯನ್ನು ಕಟ್ಟಲು ಪ್ರಾಜ್ಞರು ಮತ್ತಿಕೆ ಕೊನೆಯಲ್ಲಿ [illegible] "ರಾಮಾಯಣ ಮಹಾಮಾಲಾರತ್ನ" ಎಂದು. ಆತನ ಕೆಲಸ ಒಂದೊಂದೂ ಸಾಹಸದ್ದು, ಲೋಕಾತಿಶಯವಾದುದ್ದು, ಭಯಜನಕವಾದುದು, ಹಾಗೆಯೇ ಹಾಸ್ಯರಸವನ್ನೂ ಚಿಮ್ಮಿಸುವಂಥದು. ಹನುಮಂತ ತನ್ನ ಕೆಲಸಗಳ ಮೂಲಕ ಶಕ್ತಿಯನ್ನು, ಭಕ್ತಿಯನ್ನೂ, ಬುದ್ಧಿವಂತಿಕೆಯನ್ನೂ ಪ್ರದರ್ಶಿಸಿ ಬುದ್ಧಿಮತಾಂವರಿಷ್ಠನಾಗಿದ್ದಾನೆ. ಬೆರಳತೋರಿ ಹಸ್ತಮುಂಗುವ ಮಹತ್ಕಾರ್ಯಗಳನ್ನು ಮಾಡಿ ಲೋಕವನ್ನು ಬೆರಗುಗೊಳಿಸಿದ್ದಾನೆ. ನೀನು ಯಾರು, ನಿನ್ನಿಂದ ಇವೆಲ್ಲಾ ಹೇಗೆ ಸಾಧ್ಯವೆಂದು ಪ್ರಶ್ನಿಸಿದವರಿಗೆ ಅವನು ಕೊಟ್ಟ ಉತ್ತರ "ದಾಸೋಽಹಂ ಕೋಸಲೇಂದ್ರಸ್ಯ" ಎಂದು.

ಕೋಸಲೇಂದ್ರನ ದಾಸನಾಗಿ ಅವನಿಂದ ಆದ ಮಹತ್ಕಾರ್ಯಗಳೆಂದರೆ ಸಮುದ್ರಲಂಘನ, ಶತ್ರುದಮನ, ಸೀತಾನ್ವೇಷಣ. ರಾಮನಿಗೆ ಸೀತಾ ವೃತ್ತಾಂತವನ್ನು ಮನಮುಟ್ಟುವಂತೆ ಅರುಹಿದ ಕೋವಿದ. ಇದರಿಂದ ಶ್ರೀರಾಮನಿಗೆ ಹನುಮಂತನ ಬಗ್ಗೆ ಪ್ರೀತಿ ಅಭಿಮಾನಗಳು ಹೆಚ್ಚಿ ಹೇಳುವ ಮಾತು

ಕೃತಂ ಹನುಮತಾ ಕಾರ್ಯಂ
ಸುಮಹದ್ಭುವಿ ದುರ್ಲಭಂ ।
ಮನಸಾಪಿ ಯದನ್ಯೇನ
ನ ಶಕ್ಯಂ ಧರಣೀತಲೇ ॥

ನ ಹಿ ತಂ ಪರಿಪಶ್ಯಾಮಿ ಯಃ
ತರೇತ ಮಹಾರ್ಣವಂ ।
ಅನ್ಯತ್ರಗರುಡಾದ್ವಾ ಯೋ
ಅನ್ಯತ್ರ ಹನೂಮತಃ ॥

ದೇವದಾನವ ಯಕ್ಷಾಣಾಂ
ಗಂಧರ್ವೋರಗ ರಕ್ಷಸಾಂ ।
ಅಪ್ರಧೃಷ್ಯಾಂ ಪುರೀಂ ಲಂಕಾಂ
ರಾವಣೇನ ಸುರಕ್ಷಿತಾಂ ॥

ಯೋ ವೀರ್ಯ ಬಲಸಂಪನ್ನೋ
ದ್ವಿಷದ್ಭಿಃ ಅನಿವಾರಿತಃ ।
ಪ್ರವಿಷ್ಟಃ ಸತ್ವಮಾಶ್ರಿತ್ಯ
ಶ್ವಸನ್ನ್ಯೋನಾಮ ನಿಷ್ಕ್ರಮೇತ್ ॥

* * * *

ತನ್ನಿಯೋಗೇ ನಿಯುಕ್ತೇನ
ಕೃತಂ ಕೃತ್ಯಂ ಹನೂಮತಾ ॥

* * * *

ಅಹಂ ಚ ರಘುವಂಶಶ್ಚ
ಲಕ್ಷ್ಮಣಶ್ಚ ಮಹಾಬಲಃ ।
ವೈದೇಹ್ಯಾ ದರ್ಶನೇನಾದ್ಯ
ಧರ್ಮತಃ ಪರಿರಕ್ಷಿತಾಃ ।

ಇದಂ ತು ಮಮ ದೀನಸ್ಯ
ಮನೋ ಭೂಯಃ ಪ್ರಕರ್ಷತಿ ।
ಯದಿ ಹಾಸ್ಯ ಪ್ರಿಯಾಖ್ಯಾತುಃ
ನ ಕುರ್ಮಿ ಸದೃಶಂ ಪ್ರಿಯಂ ॥
ಏಷ ಸರ್ವಸ್ವಭೂತಸ್ತು
ಪರಿಷ್ವಂಗೋ ಹನೂಮತಃ ॥

ಇಕ್ಷ್ವಾಕು ವಂಶಪ್ರಭವ ಚಕ್ರವರ್ತಿ ಶ್ರೀರಾಮ ಹನುಮಂತನ ಕೆಲಸಗಳಿಂದ ಹರ್ಷವಿಸ್ಮಿತನಾದ, ಆನಂದ ಪಟ್ಟ. ಆದರ ಜೊತೆಗೆ ತನಗೂ ತನ್ನ ವಂಶಕ್ಕೂ ಉಪಕಾರಮಾಡಿದವನ ಮುಂದೆ ದೀನನಾಗಿ ಕಾಣಿಸಿಕೊಂಡ. ಆ ಸಮಯಕ್ಕೆ ತಕ್ಕ ಪಾರಿತೋಷಿಕ ಕೊಡಲು ಯೋಚಿಸಿ, ಆರ್ತನಾದ ತನಗೆ ಉಪಚಾರಮಾಡಿದ ಆಂಜನೇಯನನ್ನು ಬಲವಾಗಿ ಅಪ್ಪಿದ. ಪರಮಪುರುಷನ ದೇಹಾಲಿಂಗನ ಸೌಖ್ಯ ಈ ಭೌತಿಕ ಪ್ರಪಂಚದಲ್ಲಿ ದೊರೆತದ್ದು ಆಂಜನೇಯನಿಗೆಮಾತ್ರ. ದಾಸ್ಯ ಭಕ್ತಿಯಿಂದ ವಿಕ್ರೀತನಾದ ಶ್ರೀರಾಮ ತನ್ನ ಭಕ್ತನಲ್ಲಿ ಲೀನನಾದನೋ, ಐಕ್ಯಹೊಂದಿದನೋ ಎನ್ನುವಂತೆ ಗಾಢ ಪರಿಷ್ವಂಗದಿಂದ ಸಂತೋಷಪಡಿಸಿದ ಕೋಸಲೇಂದ್ರನ ದಾಸ ಊರಮುಂದಿಗೆಲ್ಲಾ ದಾತಾ ಆದ. ರಾಮನಾದ ಭಂಟ ಆರ್ತಜನರ ಉದ್ಧಾರಕನಾದ ಭೂಲೋಕದಲ್ಲಿ ರಾಮಮಹಿಮೆಯಿರುವವರೆಗೆ ಆಂಜನೇಯನು ದೇವರಂತೆ ಪೂಜನೀಯನಾದ

ಆಮಿಷೀಕೃತಮಾರ್ತಾಂಡಂ
ಗೋಷ್ಪದೀಕೃತ ಸಾಗರಂ ।
ತೃಣೀಕೃತ ದಶಗ್ರೀವಂ
ಆಂಜನೇಯಮ್ ನಮಾಮ್ಯಹಂ ॥

ಮನೋಜವಂ ಮಾರುತತುಲ್ಯ ವೇಗಂ
ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ ।
ವಾತಾತ್ಮಜಂ ವಾನರಯೂಥ ಮುಖ್ಯಂ
ಶ್ರೀರಾಮದೂತಂ ಶಿರಸಾ ನಮಾಮಿ ॥

ಯತ್ರ ಯತ್ರ ರಘುನಾಥ ಕೀರ್ತನಂ
ತತ್ರ ತತ್ರ ಕೃತಮಸ್ತಕಾಂಜಲಿಂ ।
ಬಾಷ್ಪ ವಾರಿ ಪರಿಪೂರ್ಣಲೋಚನಂ
ಮಾರುತಿಂ ನಮತ ರಾಕ್ಷಸಾಂತಕಂ ॥

ಶ್ರೀ ರಾಮ ಪಟ್ಟಾಭಿಷೇಕ ಕಾಲದಲ್ಲಿ ಆವನಿಗೆ ವಿಶೇಷವಾದ ಗೌರವವು ಸಂದಾಯವಾಯಿತು. ಜಾನಕೀದೇವಿಯು ತಾನು ಹಾಕಿಕೊಂಡಿದ್ದ

ಅನರ್ಘ್ಯ ಮಾಣಿಕ್ಯ ಹಾರವನ್ನು ಕೈಯಲ್ಲಿ ತೆಗೆದು ಕೊಂಡು, ಶ್ರೀರಾಮನ ಕಟಾಕ್ಷ ವೀಕ್ಷಣದಿಂದ ಅನುಮತಿ ಪಡೆದು, ತುಂಬಿದ ಸಭೆಯಲ್ಲಿ, ತನ್ನ ತುಂಬು ಹೃದಯದಿಂದ, ಭಂಟ ಹನುಮನಿಗೆ ಪಾರಿತೋಷಿಕವಾಗಿ ಕೊಟ್ಟಳು. ದೇವಿಯ ಅನುಗ್ರಹವು ಅವನಲ್ಲಿ ಅಪಾರ ದೈವತ್ತ್ವವನ್ನು ತುಂಬಿತು. ಶ್ರೀರಾಮನು ತನ್ನ ಅವತಾರ ಸಂಗ್ರಹ ಕಾಲದಲ್ಲಿ ಮೋಕ್ಷವನ್ನು ಕೊಡುವುದಾಗಿ ತಾನೇ ಮುಂದಾದರೂ ಹನುಮನು ಒಪ್ಪಲಿಲ್ಲ, ರಾಮ ಸಂತೋಷದಿಂದ ಪುನೀತವಾದ ತನ್ನ ಪಾರ್ಥಿವ ದೇಹವನ್ನು ತ್ಯಜಿಸಲು ಒಪ್ಪದೆ ಇಲ್ಲೇ ಚಿರಂಜೀವಿಯಾಗಿ ರಾಮಧ್ಯಾನದಲ್ಲಿ ಮುಳುಗಿ ಸಮಾಧಿಸ್ಥನಾಗಿ ಉಳಿಯಲು ನಿರ್ಧರಿಸಿದ. ಶ್ರೀರಾಮನು ಕೃಷ್ಣನಾಗಿ ಅವತರಿಸಿದಾಗ, ಕೃಷ್ಣನು ಸಾರಥಿಯಾಗಿ ಹತ್ತಿದ ರಥದ ಧ್ವಜಸ್ತಂಭದಲ್ಲಿ ಕುಳಿತು ಅರ್ಜುನನ ವಿಜಯ ಪತಾಕೆಯಾದ, ಶ್ರೀರಾಮ ಜಯರಾಮ ಸೀತಾರಾಮ – ಈನಾಮದ ಜಪವು ಅವನಿಗೆ ಬದುಕಿನ ಸರ್ವಸ್ವ. ಅವನಿಗೆ 'ಅಹಂ' ಎಂಬುದು ದಾಸೋಹಂ ಆಗಿ, ದಾಸಕೂಟವರೇಣ್ಯನಾದ ಆತನು ತನ್ನ ಮಹಿಮೆಯಿಂದ ಕೋಸಲೇಂದ್ರನ ಅನುಗ್ರಹವನ್ನು ಎಲ್ಲೆಲ್ಲೂ ಹರಿಸುತ್ತಾ, ಪಾವವನನಾಗಿದ್ದಾನೆ, ಪೂಜ್ಯನಾಗಿದ್ದಾನೆ, ಪುಣ್ಯಭೂಮಿ ಭಾರತದ ಹಳ್ಳಿಹಳ್ಳಿಯಲ್ಲೂ ಊರ ನಡುವೆ ಗಣಪ, ಊರ ಹೊರಗೆ ಹನುಮ ರಾರಾಜಿಸುತ್ತಿದ್ದಾರೆ.



(26ನೇ ಪುಟದಿಂದ)

ಪೂಜಿಸಿದ್ದಾರೆ. ರಾಮಾಯಣ 'ಓದದ ನಾಲಿಗೆ ಇಲ್ಲ; ರಾಮಾಯಣ ಕೇಳದ ಕಿವಿಯಿಲ್ಲ' ಎಂಬ ವಾಣಿ ಸತ್ಯವಾಯಿತು. ವಿಶ್ವಮಾತೆ ತನ್ನ ಮಡಿಲ ತುಂಬ ರಾಮಾಯಣ ಕೃತಿಗಳನ್ನೇ ತುಂಬಿಕೊಂಡಳು. ಆದರೆ ಫಣಿರಾಯ ಮಾತ್ರ ಥಿಣಕಿದನು, ರಾಮಾಯಣದ ಕೃತಿಗಳ ಭಾರದಲ್ಲಿ. ರಾಮಾಯಣ ಮಹಾಕಾವ್ಯದಲ್ಲಿ ಭರತ ಖಂಡದ ನೀತಿ ಸಂಸ್ಕೃತಿಗಳು ಮಡುಗಟ್ಟಿ ಹರಿದಿವೆ. ಕವಿಕಲ್ಪನೆಗಿಂತಲೂ ಸಹಜತೆಗೆ ಸ್ಥಾನ ನೀಡಿದ್ದಾನೆ ಭಾಷೆ ಸರಳವಾಗಿದೆ. ಉಪಮಾದಿ ಅರ್ಥಾಲಂಕಾರಗಳು ಹೇರಳವಾಗಿವೆ. ಕಥಾನಾಯಕನನ್ನು ಎಲ್ಲಿಯೂ ದೇವರೆಂದು ಹೇಳಿಲ್ಲ- ನರನಾದ ರಾಮನನ್ನು ಆ ಪದವಿಗೆ ಮುಟ್ಟಿಸಿದ್ದಾನೆ. ಎಲ್ಲಾ ಪಾತ್ರಗಳು ಎಲ್ಲಾ ಕಾಲದಲ್ಲೂ ಇರುವಂತಹ ಸಜೀವ ಪಾತ್ರಗಳಾಗಿವೆ. ವರ್ಣನೆಗಳು ಇದ್ದರೂ ಎಲ್ಲೂ ಎಲ್ಲೆ ಮೀರಿಲ್ಲ. ರಾಮನ ಎತ್ತರದ ಸಾಧ್ವಿಮಣಿ ಸೀತೆ, ಆದರ್ಶ ಸೋದರ ಲಕ್ಷ್ಮಣ – ಭರತ, ನೆಚ್ಚಿನ ಭಂಟ ಹನುಮ, ರಕ್ಕಸನಾದರೂ ಧರ್ಮಕ್ಕೆ ತಲೆಬಾಗಿದ ವಿಭೀಷಣ, ಮಹಿಳೆಗಾಗಿ ಪ್ರಾಣತೆತ್ತ ಗೃಧ್ರರಾಜ ಜಟಾಯು, ಮುಗ್ಧ ಭಕ್ತೆ ಶಬರಿ, ಕಪಿಯಾದ ಸುಗ್ರೀವ ಮುಂತಾದವರೂ ಸಹ ಏರಿದ್ದಾರೆ. ಇದಂತು ಎಲ್ಲರೂ ಒಪ್ಪಬೇಕಾದ ವಿಷಯವೇ ಇನ್ನು "ಶ್ರೀರಾಮನಂತಹ ನಾಯಕ, ಸೀತೆಯಂತಹ ನಾಯಕಿ ಜಗತ್ತಿನ ಯಾವ ಸಾಹಿತ್ಯದಲ್ಲೂ ಸಿಕ್ಕುವುದಿಲ್ಲ" ಎಂದು ಹೇಳಿರುವ ಶ್ರೀಮಾಸ್ತಿಯವರ ಮಾತಿಗೆ ಎರಡಿಲ್ಲ.

ರಾಮನ ಬದುಕನ್ನು ಭವ್ಯವಾಗಿ ಚಿತ್ರಿಸಿದ ವಾಲ್ಮೀಕಿ. 'ಮಾನವನ ಬದುಕು ಉನ್ನತಿ ಹೊಂದಲು ಧರ್ಮವೇ ತಳಹದಿ. ಅಂತಹ ಧರ್ಮ ಶ್ರದ್ಧೆ ಉಳ್ಳವನೇ ಆದರ್ಶಜೀವಿ. ಅದು ಮಹಾತ್ಮನಲ್ಲಿ ಇರಬೇಕಾದ ಮೊದಲ ಗುಣ. ಅರ್ಥ ಕಾಮಗಳಿಗೆ ಸುಖ ಉಂಟಾದರೂ ಅದು ಕೇವಲ ತಾತ್ಕಾಲಿಕ; ಧರ್ಮಕ್ಕಾದರೋ ಶಾಶ್ವತ. ಮಾನವ ಸದಾ ಸುಖಾಪೇಕ್ಷಿಯಾಗಿರಬಾರದು. ಯಾವನೇ ಆಗಲಿ ಪುರುಷೋತ್ತಮನಾಗಲು ಜಾತಿ ಮುಖ್ಯ ಅಲ್ಲ, ನೀತಿ ಮುಖ್ಯ.' ಮುಂತಾದ ದಿವ್ಯ ಸಂದೇಶಗಳನ್ನು ಜನತೆಗೆ ನೀಡಿದ್ದಾನೆ. ಆದರ್ಶ ಸಂಸಾರದ ಚಿತ್ರಣವನ್ನು ನೀಡಿ ಮಹಾ ಕವಿಯಾಗಿ ಮೆರೆದಿದ್ದಾನೆ- ನವರಸ ಭರಿತವಾದರೂ ಕಾವ್ಯ ಕರುಣರಸದಲ್ಲಿ ಮುಳುಗಿ ಹೋಗಿದೆ- ಆದ್ದರಿಂದಲೇ ಓದುಗರ ಸನ್ಮೋಹನಾಸ್ತ್ರವಿದು.

ವಾಲ್ಮೀಕಿಯ ಶ್ರೀಮದ್ರಾಮಾಯಣ ವಿಶ್ವವ್ಯಾಪಿಯಾಗಿದೆ. ಇಂಡೋನೇಷ್ಯ, ಥಾಯ್‌ಲ್ಯಾಂಡ್, ಲಾವೋಸ್, ಜಪಾನ್, ಜಾವಾ, ಸುಮಾತ್ರ, ಮಲಯಾ, ಕಾಂಬೋಡಿಯ, ರಷ್ಯಾ ಮುಂತಾದ ರಾಷ್ಟ್ರಗಳಲ್ಲಿ ಆ ದೇಶದ ಭಾಷೆಯಲ್ಲಿ ರಚನೆಗೊಂಡು ಪ್ರಚಲಿತವಲ್ಲಿರುವುದಲ್ಲದೆ ಈ ಕತೆ ನಮ್ಮ ದೇಶದಲ್ಲೇ ನಡೆದದ್ದು, ರಾಮ ಈ ನಾಡಿನವನೇ ಎಂದು ಹೇಳಿಕೊಳ್ಳುತ್ತಾರೆ. ರಾಮನ ವಿಗ್ರಹಗಳು, ದೇವಾಲಯಗಳು ಈ ಮೇಲ್ಕಂಡ ಕಡೆ ಇವೆ. ಎಂದು ಡಾ|| ಸೂರ್ಯನಾಥ ಕಾಮತ್‌ರವರು ಹೇಳುತ್ತಾರೆ. ರಾಮಾಯಣ ದಿನನಿತ್ಯದ ಪಾರಾಯಣವಾಗಿದೆ. ಜನತೆ ಇಂದಿಗೂ ತಮ್ಮ ನೀತಿ ಸಂಸ್ಕೃತಿಗಳಿಗೆ ಅನುಸಾರವಾಗಿ ರೂಪಕವಾಗಿ ರಂಗದ ಮೇಲೆ ಅಭಿನಯಿಸುತ್ತಿದ್ದಾರೆ. ಭರತ ಖಂಡದ ಈ ಕಾವ್ಯ ವಿಶ್ವಮಾತೆಯ ಅಮೂಲ್ಯವಾದ ಕಂಠಾಭರಣವಾಗಿದೆ. ರಾಮಾಯಣ ಕಾವ್ಯ ರತ್ನವನ್ನು ವಿಶ್ವದ ಜನರೆಲ್ಲ ತಮ್ಮದೆಂದು ಗೌರವಿಸುವಂತೆ ಮಾಡಿದ ಆದಿಕವಿ ವಾಲ್ಮೀಕಿಯನ್ನು ಎಷ್ಟು ಹೊಗಳಿದರೂ ಸಾಲದು. ★

# ಪಂಪ ರಾಮಾಯಣದ
# ರಾವಣ

ಭಾರತೀಯ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳು ಕಾಲಕಾಲಕ್ಕೆ ಅನೇಕ ಮಾರ್ಪಾಡುಗಳನ್ನು ಹೊಂದುತ್ತಾ ನಡೆದಿರುವುದು ಸರ್ವವೇದ್ಯ. ಆದರೆ ಆಯಾ ಕೃತಿಗಳಲ್ಲಿ ಆಯಾ ಕವಿಗಳು ತಾವು ಮಾಡಿಕೊಂಡಿರುವ ಮಾರ್ಪಾಡಿನೊಂದಿಗೆ ಸಾರ್ವತ್ರಿಕ ಮತ್ತು ಸಾರ್ವಕಾಲಿಕವಾದ ನಿತ್ಯಸತ್ಯವನ್ನು, ಸಾಮಾಜಿಕ ಮೌಲ್ಯವನ್ನು ಸಮರ್ಥವಾದ ರೀತಿಯಲ್ಲಿ ಎತ್ತಿ ಹಿಡಿದಿದ್ದಾರೆಂಬುದನ್ನು ಮರೆತು ನಡೆಯಲಾಗದು. "ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ ತಿಂಥಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ". ಅವೆಲ್ಲಾ ಕೃತಿಗಳೂ ತಂತಮ್ಮ ಸ್ವಂತಿಕೆಯಿಂದ ವಿಶೇಷತರವಾಗಿ ಕಂಗೊಳಿಸಿವೆಯೇ ಹೊರತು ಹೊರೆಯಂತೂ ಆಗಿಲ್ಲ. ಈ ಹಾದಿಯಲ್ಲಿಯೇ ಮುನ್ನಡೆದಿರುವ ಕಾವ್ಯಗಳಲ್ಲಿ ನಾಗಚಂದ್ರ ಕವಿಯ 'ರಾಮಚಂದ್ರ ಚರಿತ ಪುರಾಣಂ' ಬಹಳ ಪ್ರಮುಖವಾದ ಕಾವ್ಯವಾಗಿದೆ. ಕವಿ ಜೈನ ಸಂಪ್ರದಾಯದವನಾದರೂ ಅವನ ಕಾವ್ಯ ಪರಂಪರೆ ಜೈನ ರಾಮಾಯಣವೇ ಆದರೂ ತನ್ನ ಕಾವ್ಯ ನಾಯಕನ ಮತ್ತು ಕಾವ್ಯದ ಘನತೆಯನ್ನೂ ಉದಾರತೆಯನ್ನೂ, ಯಾವ ಸಂದರ್ಭದಲ್ಲಿಯೂ ಕಳಂಕಗೊಳಿಸಿಲ್ಲ. ರಾವಣನ ಪಾತ್ರದ ಚಿತ್ರಣದಲ್ಲಂತೂ ಕವಿಯು ಅತ್ಯಂತ ಜಾಣತನವನ್ನೂ, ಉನ್ನತ ದೃಷ್ಟಿಕೋನವನ್ನೂ, ಸಹೃದಯತೆಯನ್ನೂ, ಪ್ರದರ್ಶಿಸಿದ್ದಾನೆಂದರೆ ಕವಿಯ ಹೃದಯ ವೈಶಾಲ್ಯತೆಯನ್ನೂ, ಹಿರಿಯ ಚಿಂತನ ಶೀಲತೆಯನ್ನೂ ಅರಿಯಬಹುದು.

ಕವಿಯು ಪ್ರಾರಂಭದಲ್ಲಿಯೇ ರಾವಣನು ಏಕೆ ಅಪರಾಧ ಮಾಡಬೇಕಾಯಿತೆಂಬುದನ್ನು 'ಚಲಿತಮಾದುದು ಚಿತ್ತಂ' ಎಂಬ ಮಾತಿನಲ್ಲಿಯೇ ಅಡಕಗೊಳಿಸಿದ್ದಾನೆ. ರಾವಣನು ಹುಟ್ಟಿನಿಂದಲೇ ದುರ್ಗುಣಿಯಲ್ಲ ಅವನು ಸಕಲ ಸದ್ಗುಣ ಸಂಪನ್ನನು. ಮಹಾಶಿವಭಕ್ತ, ಸತ್ಪುರುಷ, ಶಿಷ್ಟಾಚಾರಿ, ಸುಸಂಸ್ಕೃತ ಹಾಗೂ ನಾಗರಿಕ ವ್ಯಕ್ತಿಯೇ ಹೌದು. ಆತನು ಪರಾಂಗನಾವಿರಕ್ತಿಯನ್ನು ವ್ರತವಾಗಿ ಸ್ವೀಕರಿಸಿರುವ ಮಹಾನುಭಾವ ಹಾಗೂ ತ್ರಿಕಾಲಜ್ಞಾನಿ. ಆದರೆ ಅಂಥವನನ್ನೂ ದುರಾದೃಷ್ಟ ಬೆಂಬತ್ತಿ ಕಾಡುತ್ತದೆ. ಹೀಗಾಗಿ ಆ ಪುಣ್ಯಪುರುಷನು ಪಾಪವ ಕೈಹಿಡಿದನೋ ಎನ್ನುವಂತೆ ಸೀತೆಗಾಗಿ ಹಂಬಲಿಸುವಂಥ ಅನಾಹುತಕ್ಕೆ ಕೈಹಾಕುತ್ತಾನೆ. ಸೀತೆಯನ್ನು ಕಂಡಾಗ ಇಂಥ ಚಿತ್ತನಿಗ್ರಹಿಗೂ ಮನಸ್ಸು ಚಂಚಲಗೊಳ್ಳುತ್ತದೆ. ಅದಕ್ಕೆ ಕಾರಣ ಸೀತೆಯ ರೂಪಾತಿಶಯದೊಡನೆ ರಾವಣನ ಪಾಲಿನ ವಿಧಿವೈಚಿತ್ರ್ಯವೂ ಒಂದೆಂಬುದು ಕವಿಯ ಅಭಿಪ್ರಾಯವಿದ್ದಂತಿದೆ.

ರಾವಣನ ಮನಸ್ಸಿನ ದೃಢತೆ ಕರಗಿ ಹೋದುದನ್ನು ಕವಿ ಬಹಳ ಮನೋಜ್ಞವಾಗಿ ತಿಳಿಸಿದ್ದಾನೆ. ಶ್ರೀರಾಮನೊಂದಿಗೆ ಸೀತೆಯು ಕುಳಿತಿರುತ್ತಾಳೆ. ಆಗಲೇ ಅವನು ಸೀತೆಯನ್ನು ಕಂಡದ್ದು – ಅದನ್ನು ಕವಿಯು "ತಣ್ಪೆಳಲ ತಾಣದೊಳ್ ಬರಸಿಡಿಲು ಬಳಿವಿಡಿದು ಪೊಳೆವ ಕುಡುಮಿಂಚಿನಂತೆ ಬಲಭದ್ರನ ಕೆಲದೊಳಿರ್ದ ಸೀತೆಯಂ ಕಂಡಂ" ಎಂದು ಹೇಳುವುದರ ಮೂಲಕ ರಾಮನ ಪರಾಕ್ರಮ ಮತ್ತು ಸೀತೆಯ ಚೆಲುವಿಗೆ ಸಮರ್ಥ ಹೋಲಿಕೆ ನೀಡಿದ್ದಾನೆ. ಅವಳ ಸೌಂದರ್ಯ 'ಬಲೆದೃಷ್ಟಿಗೆ, ವಜ್ರದ ಸಂಕಲೆ ಹೃದಯಕ್ಕೆನಿಪ ರೂಪವತಿ ಜಾನಕಿ ಕಣ್ಪೊಲಸೋಳಿರೆ ಪದ್ಮ ಪತ್ರದ ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ' ಎಂಬುದು ಕವಿಯ ಸಮರ್ಥನೆ. ಸೀತೆಯ ಕಾಂತಿಯುಕ್ತವಾದ ಹೊಳೆವ ಕಣ್ಣುಗಳಿಂದಾಗಿ 'ಕೊಳದೊಳಗೆಳವಾಲೆ ತೆರಂಬೊಳೆವಂತೆ ಕಲಂಕಿ ಕವಡಿದತ್ಕ್ಷಣದೊಳ್' – ರಾವಣನ ಮನಸ್ಸೆಂಬ ಸರೋವರ. ಇವರ ಪರಿಣಾಮವಾಗಿ –

> ವಿಹಿತಾಚಾರಮನನ್ವಯಾಗತ
> ಗುಣ ಪ್ರಖ್ಯಾತಿಯಂ, ದುಷ್ಟನಿ
> ಗ್ರಹ ಶಿಷ್ಟ ಪರಿಪಾಲನ ಕ್ಷಮೆಯುಂ
> ಕಯ್ಯಾಗ್ಗಯದನ್ಯಾಂಗನಾ
> ಸ್ಪೃಹೆಯುಂ ತಾಳಿದ್ದನಲ್ತೆ ಕಾಲವಶದಿಂ
> ಲಂಕೇಶ್ವರಂ. ವಿಸ್ಮಯಾವಹಮಲ್ತು

ಎಂಬುದು ಕವಿಯ ಉದ್ಗಾರ. ರಾವಣನ ಈ ನಡವಳಿಕೆ ಕವಿಗೆ ವಿಸ್ಮಯಕರವೇನೂ ಅಲ್ಲ. ಕವಿಯು "ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟವೇ" ಎಂಬ ಮಾತಿನ ಮೂಲಕ ರಾವಣನ ತಪ್ಪಿಗೆ ವಿನಾಯಿತಿ ತೋರಿಸಲು ಇಚ್ಛಿಸಿರುವಂತಿದೆ. ಇಲ್ಲಿ ರಾವಣನನ್ನು ಸಮುದ್ರಕ್ಕೆ ಹೋಲಿಸಿ ಕವಿಯು ರಾವಣನ ಪಾತ್ರಕ್ಕೆ ಘನತೆಯನ್ನು ನೀಡಿದ್ದಾನೆನ್ನಬಹುದು. ಆದರೂ ರಾವಣನ ಕಾರ್ಯ ತಪ್ಪು ಎಂಬುದು, ಅದರ ಪರಿಣಾಮ ಭೀಕರವೆಂಬುದು ಕವಿಗೆ ತಿಳಿ

**ಭಾರ್ಗವಿಶ್ರೀ**

ಅಭಿನವಪಂಪನೆಂದು ಹೆಸರಾದ ನಾಗಚಂದ್ರನು ತನ್ನ ರಾಮಚಂದ್ರಚರಿತಪುರಾಣಕ್ಕೆ ಆಕರವನ್ನಾಗಿ ತೆಗೆದುಕೊಂಡದ್ದು ಜೈನ ಸಂಪ್ರದಾಯದ ರಾಮಕಥೆಯನ್ನು. ವಿಮಲಸೂರಿಯ ಪಉಮಚರಿಯದಲ್ಲಿನ ಕಥೆ ಕನ್ನಡದಲ್ಲಿ ರಾಮಾಯಣವಾಗಿ ಹರಿದಿದೆ. ಆದರೆ ಇಲ್ಲಿಯೂ ನಾಗಚಂದ್ರನ ಪ್ರತಿಭೆಗೆ ಪೂರ್ಣಸ್ವಾತಂತ್ರ್ಯ ಇದ್ದೇ ಇದೆ. ಎಂತಲೇ ದುರಂತ ರಾವಣನೋ ಎಂಬಂತೆ ಚಿತ್ರಿತವಾಗಿದೆ ರಾವಣಪಾತ್ರ. ಆದರೊಂದು ಮುಖದ ಪರಿಚಯ ಇಲ್ಲಿದೆ.

ಯದೇ ಏನೂ ಇಲ್ಲ. ರಾವಣನ ಈ ದುಷ್ಕಾರ್ಯದ ಬಗೆಗೆ ಕೋಪಗೊಂಡಿರುವನೇನೋ ಎಂಬಂತೆ ಕವಿಯು–

ಅವಿವೇಕಿ ದಶಮುಖಂ ದೃ
ಷ್ಟಿ ವಿಷಾಹಿಯ ಹೆಡೆಯ ಮಣಿ
ಶಲಾಕೆಗೆ ಕಯ್ ನೀ
ಡುವ ಗಾಂಪನಂತೆ ರಘುವೀ
ರವಧೂ ಜನಕಜೆಗೆ
ಮನದೊಳಳಿಪಂ ಕಂದಂ

– ಎಂದು ತೀರ್ಮಾನಿಸಿ ಬಿಟ್ಟಿದ್ದಾನೆ. ತಿಳಿದೋ, ತಿಳಿಯದೆಯೋ ಮಾಡಿದರೂ ತಪ್ಪು ತಪ್ಪೇ. ಅದನ್ನು ಕವಿಯು ಒಪ್ಪುತ್ತಾನೆ. ಅದಕ್ಕಾಗಿ ರಾವಣನಿಗೆ 'ಅವಿವೇಕಿ' ಎಂಬ ಪಟ್ಟವನ್ನೇ ಕಟ್ಟಿಬಿಡುತ್ತಾನೆ. "ಹಾಲು ಕುಡಿದವರೇ ಬದುಕುವುದಿಲ್ಲ, ಇನ್ನು ವಿಷ ಕುಡಿದವರು ಬದುಕುತ್ತಾರೆಯೇ" ಎಂಬಂತಾಗಿದೆ ರಾವಣನ ಸ್ಥಿತಿ. ಕವಿ ತಪ್ಪು ಒಪ್ಪುಗಳೆರಡನ್ನೂ ನಿರ್ದಾಕ್ಷಿಣ್ಯವಾಗಿ, ನಿಸ್ಸಂಕೋಚವಾಗಿ, ನಿರ್ವಂಚನೆಯಿಂದ ನಿರೂಪಿಸಬಲ್ಲನು.

ರಾವಣನ ಪಾತ್ರಕ್ಕೆ ಕಳೆಗಟ್ಟುವುದು ಅವನು ಸ್ವವಿಮರ್ಶೆ ಮಾಡಿಕೊಂಡಂಥ ಸನ್ನಿವೇಶದಲ್ಲಿ. "ತಪ್ಪುಮಾಡದಿರುವುದುದೊಳ್ಳೆಯದು, ಹಾಗೊಮ್ಮೆ ಮಾಡಿದರೂ ಒಪ್ಪಿಕೊಳ್ಳುವುದು ಮತ್ತೂ ಒಳ್ಳೆಯದು" ಎಂಬ ಅನುಭವೀನುಡಿಯು ಅವತಾರವೇನೋ ಎಂಬಂತೆ; ಆ ಮಾತನ್ನು ಅಕ್ಷರಶಃ ಪಾಲಿಸಿ ತೋರಿಸಿದನೇನೋ ಎಂಬಂತೆ, ನಾಗಚಂದ್ರನ ರಾವಣನ ಪಾತ್ರವು ಕಂಗೊಳಿಸುತ್ತದೆ. ಅಂತೆಯೇ ರಾವಣನೂ ಎಚ್ಚೆತ್ತುಕೊಳ್ಳುತ್ತಾನೆ.

ರಾವಣನು ಯಾವುದೇ ಆಮಿಶಕ್ಕೆ, ಯಾರದೋ ಪ್ರೇರೇಪಣೆಗೆ ಒಳಗಾಗಿ ಮಹಾಪತಿವ್ರತೆಯಾದ ಸೀತೆಯನ್ನು ಅಪಹರಿಸಿದನು. ಇದೊಂದೇ ಒಂದು ತಪ್ಪು ಅವನ ಅದುವರೆಗಿನ ದೈವಭಕ್ತಿ, ತಪಃಶಕ್ತಿ, ಧರ್ಮಜ್ಞಾನ, ವೇದ, ಆಗಮ, ಶಾಸ್ತ್ರ ನೈಪುಣ್ಯ – ಇವೆಲ್ಲವನ್ನೂ ನುಂಗಿ ನೊಣೆದು ಅವನನ್ನೊಬ್ಬ ಕಾಮುಕನನ್ನಾಗಿ ಪರದಾರಾದ್ರೋಹಿಯನ್ನಾಗಿ, ವಿಷಯ ಲಂಪಟನನ್ನಾಗಿ, ದುರಾಚಾರಿಯನ್ನಾಗಿ, ಒಟ್ಟಾರೆ ಒಬ್ಬ ಅನಾರ್ಯನನ್ನಾಗಿ ಮಾಡಿ ಅವನು ಅಪಕೀರ್ತಿಗೂ, ಜನರ ನಿಂದೆಗೂ, ಒಳಗಾಗುವಂತೆ ಮಾಡಿಬಿಡುತ್ತದೆ. ಆದರೆ ರಾವಣನು ಕಾಮಾಂಧನಾಗಿ ಇದಾವುದರ ಕಡೆಗೂ ಲಕ್ಷ್ಯ ಹರಿಸದೆ, ಕೇವಲ ತನ್ನ ಮನೋಭಿಲಾಷೆಯ ಈಡೇರಿಕೆಯ ಬಗ್ಗೆ ಮಾತ್ರ ಯೋಚಿಸುತ್ತಿರುತ್ತಾನೆ, ಹೀಗಾಗಿ ಮುಗ್ಧೆಯೂ ನಿರ್ಮಲಚಿತ್ತಳೂ, ಪರಿಶುದ್ಧಾತ್ಮಳೂ, ಆದ ಸೀತೆಯನ್ನು ಹೊಂದಲು ನಾನಾವಿಧವಾದ ಜಾಲಗಳನ್ನು ಹೂಡುತ್ತಾನೆ. ಪತಿಪರಾಯಣೆಯಾದ ಸೀತೆಯು ಅಶೋಕವನದಲ್ಲಿ ಬಂಧಿತಳಾಗಿರುವ ಸಂಗತಿಯು ಶ್ರೀರಾಮನಿಗೆ ತಿಳಿಯುತ್ತದೆ. ಶ್ರೀರಾಮನು ಹನುಮಂತನ ಮೂಲಕ ಲಂಕೆಯ ಒಳ ರಹಸ್ಯಗಳನ್ನು ಅರಿಯುತ್ತಾನೆ, ಕಪಿವೀರರ ಬೆಂಬಲದಿಂದ ಲಂಕೆಗೆ ಮುತ್ತಿಗೆ ಹಾಕುತ್ತಾನೆ. ಅಸುರರಿಗೂ, ವಾನರರಿಗೂ ಭೀಕರವಾದ ಸಂಗ್ರಾಮ ಆರಂಭವಾಗಿಬಿಡುತ್ತದೆ. ರಾವಣನೇ ರಣಕ್ಷೇತ್ರಕ್ಕೆ ಆಗಮಿಸುವಂತಾಗುತ್ತದೆ.

ರಾವಣನು ಸಕಲ ವಿದ್ಯಾಪಾರಂಗತ. ಹಾಗಾಗಿ ಅವನಿಗೆ ಬಹುರೂಪ ಧರಿಸುವ ಸಾಮರ್ಥ್ಯವೂ ಇತ್ತು. ಇದರ ಸಹಾಯದಿಂದ ರಾವಣನು ಸೀತೆಯನ್ನು ಭೇಟಿಮಾಡಿ ತನ್ನ ಈ ಅಮೋಘವಾದ ಕೌಶಲ್ಯವನ್ನು ತಿಳಿಸಲು ಅಶೋಕವನದತ್ತ ಧಾವಿಸುತ್ತಾನೆ. ಅಲ್ಲಿದ್ದ ರಾವಣನ ಕಡೆಯ ನಾರಿಯರು ಸೀತೆಯ ಮನವನ್ನು ಪರಿವರ್ತಿಸಲಿಕ್ಕಾಗಿ ರಾಕ್ಷಸೇಶ್ವರನ ಐಶ್ವರ್ಯ; ಅವನ ಸೌಂದರ್ಯ, ಪರಾಕ್ರಮಾದಿಗಳನ್ನು ಹೊಗಳುತ್ತಾರೆ. ಅಲ್ಲಿಗೂ ಸೀತೆಯು ವಿಚಲಿತಳಾಗುವುದಿಲ್ಲ. ಆಗ ರಾವಣನೇ ಸ್ವತಃ ತನ್ನ ಹೆಚ್ಚಳಿಕೆಯನ್ನು ಸೀತೆಗೆ ಅರಿವುಮಾಡಿಕೊಡಲೆಂಬಂತೆ 'ಮಾನಿನೀ ಬಹುರೂಪಿಣೀ ವಿದ್ಯಾಸಿದ್ಧಿಯನ್ನು ಪಡೆದ ನನಗೆ ಅಸಾಧ್ಯವಾದುದು ಯಾವುದೂ ಇಲ್ಲ, ಇನ್ನು ನಿನ್ನ ಪತಿ, ಮೈದುನ ಇಬ್ಬರ ಗತಿಯೂ ಮುಗಿದಂತೆಯೇ' ಎಂದು ಅಟ್ಟಹಾಸ ಮೆರೆಯುತ್ತಾನೆ. ಈ ಮಾತುಗಳು ಹೆದರಿದವರ ಮೇಲೆ ಕಪ್ಪೆ ಎತ್ತಿ ಹಾಕಿದರು ಎಂಬಂತೆ ಮೊದಲೇ ಹೆದರಿಕೆ, ದುಃಖ, ನಿರಾಶೆ, ಚಿಂತೆಗಳಿಂದ ಬೇಯುತ್ತಿದ್ದ ಸೀತೆಯನ್ನು ಮತ್ತಷ್ಟು ಬಸವಳಿಯುವಂತೆ ಮಾಡಿಬಿಡುತ್ತವೆ. ಅವಳು ದೈನ್ಯ ತುಂಬಿದವಳಾಗಿ ರಾವಣನಲ್ಲಿ ಪತಿಭಿಕ್ಷೆ ಬೇಡುವವಳಂತೆ, "ದಶಕಂಧರ ............ಪ್ರಾಣಹರಣ ಮಾಡಬೇಡ" ಎಂದು, ಪರಿಪರಿಯಾಗಿ ಅಂಗಲಾಚುತ್ತಾಳೆ. ಕಲ್ಲೂ ಕರಗುವಂತಹ ಆವಳ ಮಾತುಗಳು ರಾವಣನ ಮೇಲೆ ಪರಿಣಾಮ ಬೀರುವ ಮೊದಲೇ ದುಃಖಾತಿರೇಕದಿಂದ ಮೂರ್ಛಿತಳಾಗುತ್ತಾಳೆ.

ಸೀತೆಯ ಈ ದಾರುಣಸ್ಥಿತಿಯೇ ರಾವಣನಂಥ ರಾಕ್ಷಸೀ ಪ್ರವೃತ್ತಿಯವನನ್ನು ಮಾರ್ಪಡಿಸಿ ಬಿಡುತ್ತದೆ. "ಸ್ತ್ರೀಣಾಂ ಜನಾಃ ನಿಷ್ಕರುಣಾಃ ಭವಂತಿ" ಎಂಬ ಮಾತಿನಂತೆ ರಾವಣನು ಕಡು ಕಠೋರನಾಗಿದ್ದನಾದರೂ, ಸೀತೆಯ ದುಃಖ – ದುಮ್ಮಾನಗಳನ್ನು ಕಂಡು ಮನಕರಗಿದವನಾಗುತ್ತಾನೆ. ಈ ಸಂಗತಿಯನ್ನು ಕವಿಯು ಬಹಳ ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಕವಿಯ ಮಾತಿನಲ್ಲಿಯೇ ನೋಡುವುದಾದರೆ —

ಕದಡಿದ ಸಲಿಲಂ ತಿಳಿವಂ
ದನೆ ತನ್ನಿಂ ತಾನೆ ತಿಳಿದ ದಶವದನಂಗಾ
ದು ವೈರಾಗ್ಯಂ ಸೀತೆಯೊ
ಳುದಾತ್ತನೊಳ್ ಪುಟ್ಟದಲ್ತೆ ನೀಲಿರಾಗಂ

–ಹೀಗೆ ಕವಿ ಒಂದು ಸಮರ್ಥವಾದ ಹೋಲಿಕೆಯ ಮೂಲಕ ರಾವಣನ ಪೂರ್ಣ ಚಾರಿತ್ರ್ಯವನ್ನು ಇಲ್ಲಿ ಚಿತ್ರಿಸುವಂತಿದೆ.

ಸಲಿಲವೇನೋ (ರಾವಣ) ಮೊದಲು ನಿರ್ಮಲವೂ, ಸ್ವಚ್ಛವೂ ಆದದ್ದಾಗಿತ್ತು. ಆದರೆ ಯಾವುದೋ ಒಂದು ವಿಷಗಳಿಗೆಯಲ್ಲಿ ಆ ಸರೋವರದ ನಿಶ್ಚಲತೆಯನ್ನು ಕಲಕುವಂತಹ ರೀತಿಯಲ್ಲಿ ಯಾವುದೋ ಕಾರಣದಿಂದ ಕಾಮುಕತನವೆಂಬ ಕಲ್ಲು ಬಿದ್ದು ನೀರೆಲ್ಲವೂ ಕಲ್ಮಷವಾಗಿತ್ತು. ಆದರೆ ಕಾಲಕ್ರಮದಲ್ಲಿ ಆ ನೀರು ಪುನಃ ತನ್ನ ಮೂಲಸ್ಥಿತಿಯನ್ನು ಹೊಂದಲು ಅವಕಾಶವಿದ್ದೇ ಇದೆ – ಎಂಬುದು ಕವಿಯ ಅಭಿಪ್ರಾಯ. ಈ ಮಾತಿಗೆ ಸಮರ್ಥನೆ ಎಂಬಂತೆ "ಉದಾತ್ತನೊಳ್ ಪುಟ್ಟದಲ್ತೆ ನೀಲಿರಾಗಂ" – ಎಂಬ ಅರ್ಥಾಂತರನ್ಯಾಸದ ಮಾತನ್ನೇ ಕವಿ ಆಡಿಬಿಟ್ಟಿದ್ದಾನೆಂದರೆ, ರಾವಣನ ವ್ಯಕ್ತಿತ್ವವು ಆ ಕವಿಯ ಮನೋಭೂಮಿಯಲ್ಲಿ ಎಂತಹ ಆಳವಾದ ರೀತಿಯಲ್ಲಿ ಪ್ರಭಾವ ಬೀರಿತ್ತೆಂಬುದನ್ನು ಅರಿಯಬಹುದು.

ಇನ್ನು ಮುಂದಿನ ಸಂಗತಿ, ರಾವಣನೆಂಬ ಸುವರ್ಣವನ್ನು ಪುಟವಿಡುವ ಕಾರ್ಯ. ಅದನ್ನು ಕವಿ ರಾವಣನ ಆತ್ಮ ವಿಮರ್ಶೆಯ ಮೂಲಕ ಸಾಧಿಸಿದ್ದಾನೆ. ಸೀತೆಯ ಬಗೆಗೆ ತನ್ನಲ್ಲಿದ್ದ ಕಾಮಭಾವ ಕರಗಿ ಅನುಕಂಪ ಮೂಡಿದಾಗ ರಾವಣನು ಅವಳನ್ನು ಯೋಗ್ಯ, ನೈಜ ದೃಷ್ಟಿಯಿಂದ ಕಾಣಲು ಯತ್ನಿಸುತ್ತಾನೆ. ಅವನು ಕೇವಲ ಉದಾತ್ತ ಮಾತ್ರನಲ್ಲ, ಧೀರೋದಾತ್ತನೂ ಹೌದು. ಹಾಗಾಗಿ ಅವನು ತಾನು ಮಾಡಿದ ತಪ್ಪನ್ನು ತನ್ನ ಕೆಲವೊಂದು ಆಪ್ತರ ಸಂಗಡವಾದರೂ ಒಪ್ಪಿಕೊಳ್ಳಲು ಸಿದ್ಧನಾಗಿದ್ದಾನೆ. ಅವನು ತನ್ನ ಆತ್ಮೀಯರೊಂದಿಗೆ ನಿವೇದಿಸಿಕೊಳ್ಳುವ ಅವನ ನುಡಿಗಳಲ್ಲಿ. ಸೀತೆಯ ಮಹಾ ವ್ಯಕ್ತಿತ್ವವನ್ನು, ರಾವಣನ ಜ್ಞಾನದ, ವಿವೇಕದ ಔನ್ನತ್ಯವನ್ನು ಕಾಣಬಹುದು. ಸೀತೆಯನ್ನು ಕುರಿತು ಕವಿಯು ರಾವಣನಿಂದ ಹೇಳಿಸಿರುವ –

ಗುಣ ಪರಿಪಾಲನಾರ್ಥಮೆನಗಂ
ಬಗೆದೋರಿದಳಿಲ್ಲ ದಿವ್ಯಭೂ
ಷಣ ವಸನಾಂಗರಾಗಮುಮನೊಲ್ಲದೆ
ಖೇಚರ ರಾಜ್ಯಲಕ್ಷ್ಮಿಯುಂ
ತೃಣಸಮನಾಗೆ ಭಾವಿಸಿದಳೀ
ಸತಿಯುಂ ಮೊದಲಾಗಿ ಪೌರುಷ
ಪ್ರಣಯಿಯೆನಿಂತಪೇಕ್ಷಿಸುವೆನೇ
ಗುಣ ಹಾನಿಯನೆನ್ನ ಪಾಪದಿಂ

ಎಂಬ ಮಾತಿನಿಂದ ಸೀತೆಯ ವಿರಾಗ, ಪತಿಭಕ್ತಿ, ಪಾತಿವ್ರತ್ಯ, ನೈತಿಕ ಘನತೆಗಳನ್ನು ಅರಿಯುವುದರೊಂದಿಗೆ, ರಾವಣನ ಮನೋವಿಕಾಸವನ್ನೂ, ಪಾಪ ಭೀತಿಯನ್ನೂ ತಿಳಿಯಬಹುದು. ಇನ್ನೂ ಮುಂದುವರಿದು ರಾವಣನು ತನ್ನ ಅಕಾರ್ಯವನ್ನು ತಾನೇ ವಿಮರ್ಶಿಸಿಕೊಳ್ಳುವ ರೀತಿಯಂತೂ ಅತ್ಯಂತ ಅಮೋಘವಾಗಿದೆ. ತಾನು ಮಾಡಿದ ಸೀತಾಪಹರಣ ಅವನಿಗೆ ಮೊದಮೊದಲೇನೋ ಬಹಳ ಹೆಮ್ಮೆಯ, ಪೌರುಷದ, ಮಹಾ ಘನಕಾರ್ಯವೆನಿಸಿತ್ತು. ಆದರೆ ಮನಸ್ಸಿಗೆ ಕವಿದಿದ್ದ ಅಹಂಕಾರ ಹಾಗೂ ಪರಸ್ತ್ರೀ ವ್ಯಾಮೋಹ ಹರಿದ ಕೂಡಲೇ ಅವನು ಮಾಡಿದ ಕಾರ್ಯ ಅವನಿಗೇ ಹೇಯವೆನಿಸುತ್ತದೆ. ಅದನ್ನು ಅವನಾಡುವ ಮಾತುಗಳು ಸ್ಪಷ್ಟವಾಗಿ ಮನದಟ್ಟು ಮಾಡಿಕೊಡುತ್ತವೆ.

ಇವರಂ ಪ್ರಾಣಪ್ರಿಯರಂ
ನೆವಮಿಲ್ಲದೆ ಕರ್ಮವಶಮೆ ನೆವಮೆನೆ ಕಂದ
ರ್ಪವಿಮೋಹದಿಂದಗಲ್ಚಿದೆ
ನವಿವೇಕಿಯೆನೆನ್ನ ಕುಲದ ಪೆಂಪಳಿವಿನೆಗಂ

ರಾವಣನ ಅಕೃತ್ಯ ಕೇವಲ ಅವನ ಅವಿವೇಕವೆಂದೆನಿಸಿದ್ದಾದರೂ ಅದು ಇಡೀ ರಾವಣನ ಕುಲದ ಕೀರ್ತಿ, ಹಿರಿಮೆ, ಘನತೆ, ಗಾಂಭೀರ್ಯಗಳನ್ನು ನುಂಗಿ ನೊಣೆದು ಬಿಟ್ಟಾಗ ರಾವಣನಿಗೆ –

ರಾಮನಿನಗಲ್ಚಿ ತಂದಾ
ಸೀಮಂತಿನಿಗಿನಿತು ದುಃಖಮುಂ ಪುಟ್ಟಿಸಿದೆಂ
ಕಾಮ ವ್ಯಾಮೋಹದಿನಾ
ಶಾಮುಖಮಂ ಪುದಿಯೆ ದುರ್ಯಶಪಟಹರವಂ

–ಎಂಬ ಪಶ್ಚಾತ್ತಾಪ ಉಂಟಾಗಿದೆ. ರಾವಣನು ಬೇವು ಬಿತ್ತಿ ಮಾವನ್ನು ಬೆಳೆಯುವಂತಹ ಕೆಲಸಕ್ಕೆ ಕೈಹಾಕಿ 'ನಾನೆಂಥ ಅಧರ್ಮಿಯೂ, ಅನ್ಯಾಯಿಯೂ, ಅನಾಗರಿಕನೂ, ಅಸಂಸ್ಕೃತನೂ ಆದೆನಲ್ಲಾ ಇದರಿಂದ ದಿಕ್ಕು ದಿಕ್ಕುಗಳಿಗೆ ಹಬ್ಬಿದ್ದ ನನ್ನ ಕೀರ್ತಿಯ ಸ್ಥಾನವನ್ನು ಅಪಕೀರ್ತಿ ಆಕ್ರಮಿಸಿಕೊಂಡು ಬಿಟ್ಟಿತಲ್ಲಾ' ಎಂದು ಮರುಗುತ್ತಾನೆ.

"ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬುದೊಂದು ಆರ್ಯೋಕ್ತಿ. ಅದಕ್ಕೆ ವ್ಯಾಖ್ಯಾನವೋ ಎಂಬಂತೆ ಕವಿಯು ರಾವಣನ –

ಜಪದಳಿವಂ, ಪರಾಭವದ ಪತ್ತುಗೆಯಂ
ದೊರೆವೆತ್ತ ತಮ್ಮ
ಮಾನಸಿಕ ಕೇಡನುನ್ನತಿಯ
ಭಿನ್ನಮನನ್ಯ ಭವಾನುಬದ್ಧಮಪ್ಪ
ಸುಗತಿಯುಂ ಸುಹೃಜ್ಜನದ
ಬೇವಸಮುಂ ಜನತಾಪವಾದಮುಂ
ವ್ಯಸನಿಗಳಾರುಮೆತ್ತಲರಿವರ್
ವಿಷಯಾಸವಮತ್ತಚೇತಸರ್

– ಎಂಬ ಮಾತಿನಲ್ಲಿ, ಕೇವಲ ಲೌಕಿಕ ವಿಷಯಾಸಕ್ತಿ ಮತ್ತು ಜಂಜಾಟಗಳಿಗೆ ಒಳಗಾದವರು ಹೇಗೆ ತಪ್ಪು ಹಾದಿಗೆ ಹೋಗುವುದರೊಂದಿಗೆ ಚಾರಿತ್ರ್ಯ ಹೀನರೂ ಆಗುವರೆಂಬುದನ್ನು ಅತ್ಯಂತ ಸಮರ್ಥವಾದ ರೀತಿಯಲ್ಲಿ ವಿಶ್ಲೇಷಿಸಿದ್ದಾನೆ.

ಹೀಗೆ ರಾವಣನು ಸಕಾಲದಲ್ಲಿಯೇ ಎಚ್ಚೆತ್ತುಕೊಳ್ಳುತ್ತಾನೆ. ಬಹಳ ಉದ್ವೇಗದಿಂದ ತನ್ನವರೊಂದಿಗೆ ತನ್ನೆಲ್ಲಾ ಲೋಪ

ದೋಷಗಳ ವಿಮರ್ಶೆಯನ್ನು ನಿಸ್ಸಂಕೋಚವಾಗಿ ಮಾಡಿಕೊಳ್ಳುವನು. ತಪ್ಪೊಪ್ಪಿಗೆ ಏನೋ ಆಯಿತು. ಆದರೆ ಅಷ್ಟಕ್ಕೆ ಸಮಸ್ಯೆ ಬಗೆಹರಿದಂತಾಗಲಿಲ್ಲ. ಸೀತೆಯ ಸಂಗತಿಯ ಬಗ್ಗೆ ಯಾವ ತೀರ್ಮಾನ ಮಾಡುವುದು? ಪುನಃ ಅವಳನ್ನು ಕಾಮುಕತೆಯಿಂದ ರಾವಣನು ಕಾಣಲಾರನು. ಏಕೆಂದರೆ ಅವನ ಮನಸ್ಸು ಈಗ ಸ್ವವಿಮರ್ಶೆಯಿಂದ ಸಂಸ್ಕಾರಗೊಂಡು ಪರಿಶುದ್ಧವಾಗಿದೆ. ಅದರಲ್ಲಿ ಪುನಃ ದುಷ್ಟಬುದ್ಧಿ ದುರಾಲೋಚನೆ ದುರಾಶಾದಿಗಳು ಮೂಡಲಾರವು. ತಾನು ಮೊದಲು ಎಸಗಿದ ಆ ದುಷ್ಕೃತ್ಯಕ್ಕೆ ರಾವಣನಿಗೆ ಮಾರೀಚಾದಿಗಳ ಸಹಾಯಬೇಕಿತ್ತು. ಆದರೆ ಸತ್ಕಾರ್ಯಕ್ಕೆ ಅವರ ಅಗತ್ಯ ಅವನಿಗೆ ಕಂಡು ಬಂದಿಲಾರದು. ಆದಕ್ಕಾಗಿ ಇದುವರೆವಿಗೂ ತನ್ನ ಆತ್ಮೀಯರೊಡನೆ ಮಾತಾಡುತ್ತಿದ್ದ ರಾವಣನು ನಂತರ ತನ್ನಲ್ಲಿಯೇ ತಾನು ಮುಂದೆ ಮಾಡಬೇಕಾಗಿರುವ ಕಾರ್ಯ ಹಾಗೂ ಅಪರ ಆಚರಣೆಯನ್ನು ರಹಸ್ಯವಾಗಿ ತೀರ್ಮಾನಿಸಿಕೊಳ್ಳುತ್ತಾನೆ.

ಇರದುಯಿದ್ದೆಗಳೆ ಕೊಟ್ಟೆಡೆನ್ನ
ಕಡುವುಂ ಕಟ್ಟಾಯಮುಂ ಬೀರಮುಂ
ಬಿರುದುಂ ಬೀಸರಮಕ್ಕುಮ್
ಓಸರಿಸಿದಂತಾಗಿರ್ಕುಮಂತಾಗದಂತಿರೆ
ದೋರ್ಗರ್ವಮನಿರ್ವಲಂ ಪೊಗಳ್ವಿನಂ
ಸೌಮಿತ್ರಿಯುಂ ರಾಮನಂ
ವಿರಥರ್ಮಾಡಿ ರಣಾಗ್ರದೊಳ್ ಪಿಡಿದು
ತಂದಾಂ ಕೊಟ್ಟಪೆಂ ಸೀತೆಯಂ

ಎಂಬ ಅವನ ಮಾತಿನಲ್ಲಿ ತಪ್ಪೊಪ್ಪಿಗೆ ಇದೆಯಾದರೂ ಹೇಡಿತನವಿಲ್ಲ. ಅವನು ಮಾನಿಸಿಕಗರ್ವ ವಿಮುಕ್ತನಾಗಿದ್ದಾನೆ. ಕೇವಲ ಬಾಹುಗರ್ವವಿದೆ. ಆದೂ ಕೂಡ ಸೀತೆಯಂತಹ ಅನರ್ಘ್ಯ ಸ್ತ್ರೀರತ್ನಕ್ಕೆ ವೀರರಾದ ರಾಮಲಕ್ಷ್ಮಣರನ್ನು ಕಾಣಿಕೆಯಾಗಿ ನೀಡುವುದಕ್ಕಾಗಿಯೇ ಹೊರತು, ಅನ್ಯಥಾ ಅಲ್ಲ ಅಷ್ಟು ಪರಿಶುದ್ಧಾತ್ಮನಾಗಿದ್ದಾನೆ ರಾವಣ.

ಹೀಗೆ ಕವಿಯು ತನ್ನ ಅಸಾಧಾರಣವಾದ ಕಲ್ಪನಾ ಕುಂಚದಿಂದ ರಾವಣನ ಪಾತ್ರಕ್ಕೆ ವಿಶೇಷವಾದ ಹೊನ್ನಬಣ್ಣವನ್ನೇ ನೀಡಿದ್ದಾನೆಂದರೆ ತಪ್ಪಾಗಲಾರದು.

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತ ಪ್ರಕಾರಮಿದು
ಸುಖಮಿದು ದುಃ
ಖೋಪಾತ್ತಮಿದೆಂದರಿವುಗು
ಮಾಪರಮ ಕವಿ ಪ್ರಧಾನರಾ
ಕಾವ್ಯಂಗಳ್

ಎಂಬ ಕವಿರಾಜಮಾರ್ಗಕಾರನ ಮಾತಿನ ಮತಿತಾರ್ಥವನ್ನು ಈ ಕವಿತೆಯೂ ಹೊರಹೊಮ್ಮಿಸಿದೆ ಎಂದರೆ ಅನ್ಯಥಾ ಭಾವಿಸಲಾಗದು.

---

# ಈಶ್ವರ ತತ್ವ

( ಮುಂದುವರಿದದ್ದು )

ಬ್ರಹ್ಮನು ಪ್ರಕೃತಿ ಆತ್ಮನಿಗಿಂತ ಅತೀತನು. ಸ್ವಯಂಪರಿಪೂರ್ಣನು. ಸಂಪೂರ್ಣಜ್ಞಾನ ಮಯನು, ಆನಂದಸ್ವರೂಪನು, ಅನಂತ ಕಲ್ಯಾಣ ಗುಣಗಣನು.

ತೈತ್ತಿರೀಯ ಉಪನಿಷತ್ತು ಪರಬ್ರಹ್ಮನನ್ನು 'ಸತ್ಯಂ ಜ್ಞಾನಂ ಅನಂತಂ' ಎಂದು ವರ್ಣಿಸಿದೆ. ಈ ಶಬ್ದಗಳ ಅರ್ಥವನ್ನು ರಾಮಾನುಜರು ಹೀಗೆ ವಿವರಿಸಿದ್ದಾರೆ. ಪರಬ್ರಹ್ಮನು ಮೂಲಪ್ರಕೃತಿ, ಜೀವಾತ್ಮನಿಗಿಂತ ಭಿನ್ನನು, ಸತ್ಯಂ ಎಂದರೆ ಪರಬ್ರಹ್ಮನು ಯಾವ ನಿಯಮಕ್ಕೂ ಒಳಪಡುವವ ನಲ್ಲ. ಅವನಿಗೆ ಯಾವ ಬಗೆಯ ಉಪಾಧಿಯೂ ಇಲ್ಲ. ಪ್ರಕೃತಿ, ಜೀವಾತ್ಮರು ನಿಯಮಬದ್ಧರು, ವಿಕಾರವುಳ್ಳವರು. ಜ್ಞಾನಂ ಎಂದರೆ ಶಾಶ್ವತ ಬುದ್ಧಿಯುಳ್ಳವನು. ಈ ಪದವು ಮುಕ್ತಾತ್ಮ ರನ್ನು ಒಳಗೊಳ್ಳುವುದಿಲ್ಲ. ಏಕೆಂದರೆ ಬಂಧ ಕಾಲದಲ್ಲಿ ಅವರಿಗೆ ಪರಿಮಿತಜ್ಞಾನವಿತ್ತು. ಅನಂತಂ ಎಂದರೆ ಸರ್ವದೇಶ, ಸರ್ವಕಾಲ ಸರ್ವ ಸ್ಥಿತಿಗೆ ಒಳಪಡದವನು. ನಿತ್ಯರು ಈ ಪದದ ವ್ಯಾಪ್ತಿಗೆ ಬರುವುದಿಲ್ಲ. ಸಂಪೂರ್ಣಜ್ಞಾನಾನು ಭವಕ್ಕೆ ಸಂಪೂರ್ಣ ಪರಿಜ್ಞಾನವುಳ್ಳವನು, ಪರ ಬ್ರಹ್ಮನನ್ನು "ಭಿನ್ನಪ್ರವೃತ್ತಿ ನಿಮಿತ್ತಾನಾಂ ಶಬ್ದಾನಾಂ ಏಕಸ್ಮಿನ್ನರ್ಥ ವೃತ್ತಿಃ, ಸಾಮಾನಾಧಿ ಕರಣ್ಯಂ" ಎಂದಿದ್ದಾರೆ ರಾಮಾನುಜರು.

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ರಾಮಾನುಜರು ಪರಬ್ರಹ್ಮನನ್ನು ಸೃಷ್ಟಿ, ಸ್ಥಿತಿ ಲಯವನ್ನು ಮಾಡುವ ಚತುರ ಎಂದಿದ್ದಾರೆ. ಆಶ್ಚರ್ಯರೂಪವಾಗಿರುವ ಪ್ರಪಂಚವು ಚರಾಚರ ರೂಪವಾಗಿರುವ ವಿವಿಧ ಭೋಗಸಾಮಗ್ರಿಗಳಿಂದ ಕೂಡಿ ಭೋಗಾನುಭವಿಗಳಾದ ಚೇತನರನ್ನು ಒಳಗೊಂಡಿದೆ. ಇಂತಹ ವಿಚಿತ್ರ ಪ್ರಪಂಚಕ್ಕೆ ಪರಬ್ರಹ್ಮನು ಮೂಲಕಾರಣನು ಮತ್ತು ನಿಯಾ ಮಕನು. ಈ ಜಗತ್ತು ಅವನಿಂದಲೇ ಹುಟ್ಟಿ ಅವನಲ್ಲಿಯೇ ಲಯವಾಗತಕ್ಕದ್ದು. ಹೀಗೆ ಸೃಷ್ಟಿ, ಕಾರಣತ್ವ, ಸ್ಥಿತಿಕಾರಣತ್ವ ಲಯಕಾರಣತ್ವವನ್ನು ಸರ್ವೇಶ್ವರನು ಭೋಗರೂಪವಾಗಿ ಸಂಗ್ರಹಿ ಸುತ್ತಾನೆ.

"ಸದ್ವೈವಸೌಮ್ಯೇದಮಗ್ರ ಆಸೀತ್ ಏಕಮೇವಾ ದ್ವಿತೀಯಂ ತದೈಕ್ಷತ ಬಹುಸ್ಯಾಂ ಪ್ರಜಾಯೇ ಯೇತಿ" ಎಂಬುದು ಛಾಂದೋಗ್ಯದ ವಾಕ್ಯ. ಒಬ್ಬನೇ ಆಗಿದ್ದ ಪರಬ್ರಹ್ಮನು 'ನಾನು ಅನೇಕ ವಾಗಿರುವೆನು' ಎಂದು ಸಂಕಲ್ಪಮಾಡುವನು. ಇಲ್ಲಿ 'ಇದಂ' ಶಬ್ದವು ಬಹುತ್ವವಸ್ತು ಪ್ರಪಂಚ ವನ್ನು ಸೂಚಿಸುತ್ತದೆ. ಸೃಷ್ಟಿಗೆ ಮುಂಚೆ ಸತ್ ಎಂಬ ಪರಬ್ರಹ್ಮ ವಸ್ತು ಒಂದೇ ಇತ್ತು. ಅದು ಅತಿ ಸೂಕ್ಷ್ಮಸ್ಥಿತಿಯಲ್ಲಿತ್ತು — ಇಲ್ಲವೇನೋ ಎಂಬುವಷ್ಟು ಸೂಕ್ಷ್ಮ. 'ಏಕಮೇವ' ಎಂಬ ಶಬ್ದವು ಅವ್ಯಕ್ತ ಸ್ಥಿತಿಯಲ್ಲಿ ಒಂದೇ ಒಂದು ವಸ್ತು ಇತ್ತು ಎಂದು ಸೂಚಿಸುತ್ತದೆ. ಈಗಿನ ಬಹುತ್ವವಸ್ತು ಪ್ರಪಂಚ ಆಗ ಇರಲಿಲ್ಲ. ಆ ಸತ್ಯವೆಂಬ ಪರಬ್ರಹ್ಮನೇ ಏಕತ್ವಾವಸ್ಥೆಯಿಂದ ನಾಮರೂಪ ವಿಭಾಗಕ್ಕೆ ಅರ್ಹವಾಗಿ ಕಾರಣ ವಾಯಿತು. ಹೀಗೆ ಕಾರ್ಯರೂಪದಲ್ಲಿ ಪ್ರಪಂಚ, ಕಾರಣರೂಪದಲ್ಲಿ ಬ್ರಹ್ಮ. ಇದನ್ನು ಉಪನಿಷತ್ತು ಗಳು ಚೆನ್ನಾಗಿ ತಿಳಿಸುತ್ತವೆ.

ಸರ್ವೇಶ್ವರನು ಸರ್ವಶೇಷಿಯಾಗಿದ್ದಾನೆ. 'ಮೋದತೇ ಭಗವಾನ್ ಭೂತೈಃ ಬಾಲಃ ಕ್ರೀಡನ ಕೈರಿವ' ಎಂಬಂತೆ ಪರಮಾತ್ಮನು ಚಿದಚಿತ್ತು ಗಳೊಡನೆ ಲೀಲೆಯಲ್ಲಿ ಪ್ರವರ್ತಿಸುವನು, ಆನಂದ ಪಡುವನು. ಯಾವಾಗ ಇಂತಹ ಪ್ರಪಂಚ ಪ್ರವರ್ತನೆಯು ಲೋಕದಂಪತಿಗಳ ಪ್ರಯೋಜನಕ್ಕೆ ಎಂದಾಯಿತೋ ಆಗ ಎಲ್ಲ ಜೀವಾತ್ಮರ ಐಹಿಕ ಭೋಗಕ್ಕೂ ಆಮುಷ್ಮಿಕ ಫಲಪ್ರಾಪ್ತಿಗೂ ಅವನೇ ಉಪಾಯಭೂತನೂ, ಉಪೇಯಭೂತನೂ ಆದನು. ಹೀಗೆ ಪರಮಾತ್ಮನು ಪರ ಪ್ರಯೋಜನವೇ ಮುಖ್ಯವಾಗಿರುವಂತೆ ಏರ್ಪಡಿಸಿ, ಚಿದಚಿತ್ತುಗಳನ್ನು ಸ್ವೀಕರಿಸಿ ಅವರಿಂದ ತಾನು ಅತಿಶಯಹೊಂದುವುದೇ ಶೇಷಿ ಎಂಬುದರ ಅಭಿಪ್ರಾಯ.

ಶೇಷಿ ಎಂಬ ಶಬ್ದವು ಇಂದ್ರಿಯ ಜ್ಞಾನವುಳ್ಳ ಹಾಗೂ ಇಂದ್ರಿಯಜ್ಞಾನವಿಲ್ಲದ ವಸ್ತುಗಳಿಗೂ ಅನ್ವಯಿಸುವುದು. ಹಾಗೆಯೇ ಶೇಷ ಶಬ್ದವು ಇಂದ್ರಿಯ ಜ್ಞಾನವುಳ್ಳವಸ್ತುವಿಗೂ ಇತರರ ಪ್ರಯೋಜನಕ್ಕಾಗಿಯೇ ಇರುವ ಅಚೈತನ್ಯ ವಸ್ತುವಿಗೂ ಅನ್ವಯಿಸುವುದು. ದಾಸ ಎಂಬ ಶಬ್ದವು ಇಂದ್ರಿಯ ಚೈತನ್ಯವುಳ್ಳ ವಸ್ತುವಿಗೆ ಮಾತ್ರ ಅನ್ವಯಿಸುವುದು. ಆದುದರಿಂದ ಜೀವಾತ್ಮರ ಮತ್ತು ಪರಮಾತ್ಮನ ಮಧ್ಯೆ ಇರುವ ಶೇಷಶೇಷಿಭಾವವು ಸ್ವಾಮಿದಾಸ ಸಂಬಂಧದ ಶಿಖರ ಮುಟ್ಟಬೇಕೆಂದು ವೇದಾಂತದೇಶಿಕರು ತಿಳಿಸಿದ್ದಾರೆ. ಹೀಗಾದರೆ ಪ್ರತಿಯೊಬ್ಬ ಜೀವಾತ್ಮನ ಸ್ವಾತಂತ್ರ್ಯ ಅಂತರ್ಗತವಾಗಿ ಸರ್ವಶೇಷಿಯಾದ, ಪ್ರಭುವಾದ ಪರಬ್ರಹ್ಮನ ಸೇವೆಗಾಗಿ ಮುಡುಪಾಗಿ ಟ್ಟಂತಾಗುವುದು. ಪರಮಾತ್ಮನ ಇಷ್ಟಾನುಗುಣ ವಾಗಿ ಜೀವಾತ್ಮನು ನಡೆದರೆ ಅವನ ಅಹಂಕಾರ ನಾಶವಾಗಿ, ಸ್ವಾಭಿಮಾನ ನಿರಸ್ತವಾಗಿ ಪರಮಾತ್ಮನ ಸೇವೆಯಲ್ಲಿ ಸದಾ ನಿರತ ನಾಗುವನು.

ಶ್ರೀ ಡಿ. ಕೃಷ್ಣ ಅಯ್ಯಂಗಾರ್

"ಅಸ್ಮದಾಸ್ಯಂ ಪರೇಶ ಸ್ವಾಮ್ಯಂ ಸ್ವಭಾವಂ ಚ ಸದಾ ಸ್ಮರ" ಎಂಬಂತೆ ಸರ್ವಶೇಷಿಯ ನಿಜ ಸ್ವರೂಪವನ್ನು ತಿಳಿಸಲಾಗಿದೆ. ಇಂತಹ ಸರ್ವಶೇಷಿ ಭಾವನೆಯ ಪರಿಣಾಮವಾಗಿ ಪರಮಾತ್ಮನು ಶೇಷಿ ಮತ್ತು ಸ್ವಾಮಿಯಾಗಿ ಸಂಪೂರ್ಣ ವೈಭವವನ್ನು ಹೊಂದುವನು. ಹೀಗೆ ಜೀವಾತ್ಮ ಪರಮಾತ್ಮರ ಸಂಬಂಧ ಎರಡು ವಿಧವಾಗಿರುವುದು. ಒಂದು ಶೇಷನು ಯಾವ ಉಪಯೋಗಕ್ಕಾಗಿ ತಾನಿರುವನೋ ಅಂಥ ಸ್ವಾಮಿಯ ಸೇವೆಯಲ್ಲಿ ಸದಾ ನಿರತವಾಗಿರುವುದು. ಇನ್ನೊಂದು ಶೇಷಿಯ ಜವಾಬ್ದಾರಿ ತನಗೆ ಸೇರಿದ ವಸ್ತುವನ್ನು ರಕ್ಷಿಸುವುದು. ಈಶ್ವರನು ತನ್ನ ಸೇವಕರನ್ನು ರಕ್ಷಿಸಲು ಶಕ್ತನಾಗಿದ್ದಾನೆ.

ಸರ್ವಾಧಾರತ್ವ, ಸರ್ವನಿಯಂತೃತ್ವ, ಸರ್ವ ಶೇಷಿತ್ವ, ಸರ್ವಶರೀರತ್ವ, ಸರ್ವಕಾರಣತ್ವ — ಇತ್ಯಾದಿ ಅಸಾಧಾರಣ ಧರ್ಮಗಳೊಡನೆ ಕೂಡಿರುವ ಈಶ್ವರಸ್ವರೂಪವು, ಉಭಯವಿಭೂತಿ ಕಾರ್ಯ ನಿರ್ವಾಹಕ್ಕಾಗಿ ಮತ್ತು ಭಕ್ತಾನುಗ್ರಹಕ್ಕಾಗಿ ತನ್ನ ಸಂಕಲ್ಪವಿಶೇಷದಿಂದ ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚ— ಎಂಬ ಐದುರೂಪಗಳನ್ನು ಧರಿಸುವನು. "ಮಮ ಪ್ರಕಾರಾಃ ಪಂಚೇತಿ ಪ್ರಾಹುರ್ವೇದಾಂತಪಾರಗಾಃ ಪರೋವ್ಯೂಹಶ್ಚ ವಿಭವೋನಿಯಂತಾಸರ್ವದೇಹಿನಾಂ ಅರ್ಚಾವ ತಾರಶ್ಚ ತಥಾ" ಎಂದು ವಿಷ್ವಕ್ಸೇನ ಸಂಹಿತೆಯು ನಿರ್ದೇಶನ ಮಾಡಿದೆ. ಈ ಐದು ರೂಪಗಳು ಪವಿತ್ರವಾದುವು, ಸತ್ಯವಾದುವು. ಇಂತಹ ಶುಭಾಶ್ರಯ ಪರಮಾತ್ಮನ ಅನಂತ ಕಲ್ಯಾಣ ಗುಣಗಳಿಗೆ ಇಲ್ಲಿ ಸಂಕೋಚವಿರುವುದಿಲ್ಲ. ಇವೆಲ್ಲ ಪರಮಾತ್ಮ ಸಾಕ್ಷಾತ್ಕಾರಕ್ಕೆ ಅರ್ಹವಾಗಿವೆ. ಗುಣಪರಿಪೂರ್ಣವಾಗಿವೆ

ಇವುಗಳಲ್ಲಿ ಅರ್ಚಾವತಾರವು ಸಮಸ್ತ ಚೇತನ ವರ್ಗಕ್ಕೆ ಉಪಾಸ್ಯವಾಗಿಯೂ, ಪ್ರಾಪ್ಯವಾಗಿಯೂ ಇರುವುದೆಂಬುದನ್ನು ಶ್ರುತಿಗಳು ಸ್ಪಷ್ಟಪಡಿಸಿವೆ. ಇವನ್ನು ಶೌನಕರು ಹೀಗೆ ಸಂಗ್ರಹಿಸಿದ್ದಾರೆ.

ಸುರೂಪಾಂ ಪ್ರತಿಮಾಂ ವಿಷ್ಣೋಃ
ಪ್ರಸನ್ನ ವದನೇಕ್ಷಣಾಮ್

ಕೃತ್ವಾತ್ಮನಃ ಪ್ರತಿಕೃತಿಂ
ಸುವರ್ಣ ರಜತಾದಿಭಿಃ ।
ತಾಮರ್ಚಯೇತ್ತಾಂ ಪ್ರಣಮೇತ್ತಾಂ
ಭಜೇತ್ತಾಂ ವಿಚಿಂತಯೇತ್
ವಿಶತ್ಯಪಾಸ್ತ ದೋಷಸ್ತು
ತಾಮೇವ ಬ್ರಹ್ಮರೂಪಿಣೀ ॥

ಪರಮಾತ್ಮನ ಸುಂದರರೂಪವನ್ನು ಲೋಹಾದಿಗಳಿಂದ ಮಾಡಿಸಿ ಪ್ರತಿಷ್ಠಿಸಿ, ಪೂಜಿಸಿ, ಧ್ಯಾನಿಸಿ, ಸಮಸ್ಕರಿಸಿ ಆಕರ್ಷಯುತವನ್ನಾಗಿ ಯಾರು ಮಾಡುವರೋ ಅವರು ಪರಿಪೂರ್ಣ ಬ್ರಹ್ಮಾನಂದವನ್ನು ಪಡೆಯುವರು. ಹೀಗೆ ಅರ್ಚಾವತಾರವು, ಪರಮಾತ್ಮ ಸೌಲಭ್ಯಕ್ಕೆ ಸೀಮಾಭೂಮಿಯಾಗಿ ಸಮಸ್ತ ಚೇತನರಿಗೆ ಆಶ್ರಯಣೀಯವಾಗಿಯೂ ಆಕರ್ಷಣೀಯವಾಗಿಯೂ ಇರುವುದು.

ಈಶ್ವರನು ಅನಂತ ಕಲ್ಯಾಣಗುಣ ಪರಿಪೂರ್ಣನಾದರೂ ಷಾಡ್ಗುಣ್ಯಪರಿಪೂರ್ಣನು. ಈ ಗುಣಗಳು ಸ್ವಾಮಿಯ ಪರತ್ವವನ್ನು, ಸರ್ವಶ್ರೇಷ್ಠ ಸ್ವಭಾವವನ್ನೂ ಸೂಚಿಸುತ್ತವೆ. ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು – ಇವೇ ಆ ಆರು ಗುಣಗಳು. ಹೀಗೆಯೇ, ಸೌಶೀಲ್ಯ, ಸೌಲಭ್ಯ, ವಾತ್ಸಲ್ಯ, ದಯಾದಿ ಗುಣಗಳೂ ಇವೆ. ಸ್ವಾಮಿಯ ಅನಂತಕಲ್ಯಾಣ ಗುಣಗಳನ್ನು ರಾಮಾನುಜರು ಗದ್ಯತ್ರಯದಲ್ಲಿಯೂ ಗೀತಾಭಾಷ್ಯದಲ್ಲಿಯೂ ವಿಶೇಷವಾಗಿ ವರ್ಣಿಸಿದ್ದಾರೆ. ಇಲ್ಲಿ ಐಶ್ವರ್ಯಪದಕ್ಕೆ ವಿಶೇಷ ರೀತಿಯ ಅರ್ಥವಿದೆ. "ಕರ್ತೃತ್ವಂ ನಾನುಯುಕ್ತಸ್ಯ ಸ್ವಾತಂತ್ರ್ಯ ಪರಿಬೃಂಹಿತಂ ಐಶ್ವರ್ಯಂ ನಾಮ ತತ್ಪ್ರೋಕ್ತಂ ಗುಣ ತತ್ತ್ವಾರ್ಥಚಿಂತಕೈಃ" ಎಂಬಂತೆ ಜ್ಞಾನ ಬಲ ವಿಶಿಷ್ಟನಾದ ಪರಮಾತ್ಮನಲ್ಲಿ ನಿರಂಕುಶತ್ವ ಸ್ವಾತಂತ್ರ್ಯದಿಂದ ಉತ್ತೇಜಿತನಾಗಿ ಜಗತ್ಕರ್ತೃತ್ವ ಎಂಬ ಧರ್ಮ ಮತ್ತು ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ನಿಮಿತ್ತಕಾರಣತ್ವ ಎಂಬ ಎರಡು ಧರ್ಮವೂ, ಐಶ್ವರ್ಯಗುಣವಾಗಿರುವುದು. ಇದನ್ನು ವೇದಾಂತದೇಶಿಕರು, 'ಅನ್ಯಾಹತೇಚ್ಛಂ, ಸರ್ವ ನಿಯಂತೃತ್ವಂ' ಎಂದಿದ್ದಾರೆ.

ಈಶ್ವರನು ಅನಾದಿಸಿದ್ಧನಾಗಿ ತನ್ನ ಪ್ರಾಪ್ತಿಗೆ ತಾನೇ ಮುಖ್ಯಸಾಧನವಾಗಿ ಉಪಾಯಭೂತನಾಗಿರುವುದರಿಂದ ಅವನು ಸಿದ್ಧೋಪಾಯನು. "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ" ಎಂಬ ಶ್ರುತಿವಾಕ್ಯದಂತೆ, ಪರಮಾತ್ಮನು ಕೇವಲ ಶ್ರವಣ, ಮನನ, ನಿದಿಧ್ಯಾಸನಗಳಿಂದಲೇ ಲಭ್ಯವಾಗುವುದಿಲ್ಲ. ಯಾರು ಅವನಿಗೆ ಪ್ರಿಯತಮನೋ ಅಂಥವನನ್ನು ಅವನು ವರಿಸುವನು. ಹೀಗೆ ಪ್ರಿಯತಮನಾಗಬೇಕಾದರೆ ಅವನಿಗೆ ಭಕ್ತಿರೂಪವಾದ ಪ್ರೀತಿ ಭಗವಂತನಲ್ಲಿರಬೇಕು.

"ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್। ವಿವಿಧಾಶ್ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರಪಂಚಮಮ್" ಎಂಬಂತೆ ಚೇತನನ ಮೋಕ್ಷಪ್ರಾಪ್ತಿಗೆ ಸಾಧನವಾಗಿ ಕರ್ತನಾದ ತನ್ನ ಕಾರ್ಯವೂ, ದೈವವಾದ ಶ್ರಿಯಃಪತಿಯ ಕಾರ್ಯವೂ, ಪ್ರಧಾನವಾಗಿ ಕರುಣೆಯಿಂದ ಕೂಡಿ ಸಿದ್ಧೋಪಾಯವೆನಿಸುವುವು. ಜೀವಾತ್ಮನ ಕಾರ್ಯಗಳು ಭಕ್ತಿ, ಪ್ರಪತ್ತಿಗಳಾಗಿ ಸಾಧ್ಯೋಪಾಯವೆನಿಸುವುವು. ಜೀವಾತ್ಮನ ಕಾರ್ಯ ಪರಮಾತ್ಮನಿಗಧೀನವಾಗಿರುವುದರಿಂದ ಸರ್ವೇಶ್ವರನ ಕಾರ್ಯ, ಜೀವನಕಾರ್ಯ ಎರಡೂ ಅಗತ್ಯ. ಸಿದ್ಧೋಪಾಯನಾದ ಪರಮಾತ್ಮನ ಕೃಪೆಯೂ, ಸಾಧ್ಯೋಪಾಯವಾದ ಭಕ್ತಿ ಅಥವಾ ಪ್ರಪತ್ತಿ ಎರಡೂ ಮುಕ್ತಿಗೆ ಅತ್ಯಗತ್ಯ.

ಜ್ಞಾನನಿಧಿಯಾದ ಯಾಮುನ ಮುನಿಗಳು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ಹೇ! ಪರಮಾತ್ಮಾ! ನನ್ನ ದೇಹವಾಗಲಿ, ಪ್ರಾಣವಾಗಲಿ, ಎಲ್ಲರೂ ಅಪೇಕ್ಷಿಸುವ ಸುಖವಾಗಲಿ, ಹೆಚ್ಚೇನು। ನನ್ನ ಆತ್ಮವೇ ಆಗಲಿ, ನಿನ್ನ ಸೇವಾಭಾಗ್ಯಕ್ಕೆ ಉಪಯೋಗವಾಗದಿದ್ದರೆ, ಅದನ್ನು ನಾನು ಒಂದುಕ್ಷಣವೂ ಸಹಿಸಲಾರೆ. 'ಹೇ! ನಾಥ! ಅದು ಹಾಗಿದ್ದರೆ, ಶತಶಃ ಅದು ಹಾಳಾಗಲಿ. ಹೇ! ಮಧುಸೂದನಾ! ಈ ನನ್ನ ವಿಜ್ಞಾಪನೆಯು ಸತ್ಯ' ಎಂದಿದ್ದಾರೆ. ಒಟ್ಟಿನಲ್ಲಿ ಜಗತ್ಕಾರಣತ್ವ, ಸರ್ವಾಧಾರತ್ವ, ಮೋಕ್ಷಪ್ರದತ್ವ, ಸರ್ವಾಂತರ್ಯಾಮಿತ್ವ, ಸರ್ವಶರೀರತ್ವ, ಸರ್ವಫಲಪ್ರದತ್ವ, ಲಕ್ಷ್ಮೀಪತಿತ್ವ ಇತ್ಯಾದಿಗುಣವುಳ್ಳವನು ಸರ್ವೇಶ್ವರ. ಇದೇ ಈಶ್ವರತತ್ತ್ವ. ★

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು

### ಅರ್ಜಿತ ಸೇವಾ ವಿವರ

| | | | | |
|---|---|---|---|---|
| 1. | ದರ್ಶನ: | ವಿಶೇಷ ಪ್ರವೇಶಃ ಪ್ರತಿಯೊಬ್ಬರಿಗೆ | ರೂ | 2–00 |
| 2. | ಅರ್ಜಿತ: | ಕಾಲಸೋಲ 1) ಪೊಂಗಲ್ | ರೂ | 55–00 |
| | | 2) ಪುಳಿಯೋಗರೆ | ರೂ | 50–00 |
| | | 3) ದಧ್ಯೋದನ | ರೂ | 40–00 |
| | | 4) ಕೇಸರಿಬಾತ್ | ರೂ | 85–00 |
| | | 5) ಸಕ್ಕರೆ ಪೊಂಗಲ್ | ರೂ | 65–00 |
| | | 6) ದೋಸೆ | ರೂ | 35–00 |
| | | 7) ಶಾಕರಬಾತ್ | ರೂ | 90–00 |
| | | 8) ಸೀರಾ | ರೂ | 155–00 |
| 3. | ಸೇವೆಗಳು: | 1) ನಿತ್ಯ ಅರ್ಚನೆ ಒಂದು ವರ್ಷಕ್ಕೆ | ರೂ | 150–00 |
| | | 2) ಸಹಸ್ರನಾಮಾರ್ಚನೆ | ರೂ | 6–50 |
| | | 3) ಅರ್ಚನೆ | ರೂ | 1–00 |
| | | 4) ಆರತಿ | ರೂ | 0–50 |
| | | 5) ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ | 100–00 |
| | | 6) ಊಂಜಲ್ ಸೇವೆ ( ,, ಸಂಜೆ) | ರೂ | 150–00 |
| | | 7) ತಿರುಚ್ಚಿ ಉತ್ಸವ | ರೂ | 63–00 |
| | | 8) ಗಜವಾಹನ | ರೂ | 32–00 |

—ಪೇಷ್ಕಾರ್

# ಲಲಿತಾ ಪರಮೇಶ್ವರಿ

ಸಹಸ್ರಾರು ಜನರು ಸಹಸ್ರನಾಮ[illegible]ವನ್ನು ಪಠಿಸುತ್ತಾ ಜಪಿಸುತ್ತಾ [illegible] ಮಾಡುವ ಲಲಿತಾ ಪರಮೇಶ್ವರಿಯ [illegible]ಖ್ಯಾನವಿದು.

ಪೂರ್ವದಲ್ಲಿ ಪ್ರೇಮಾಧಿಪತಿ ಮನ್ಮಥ ಶಿವನ ಹಣೆಗಣ್ಣಿನ ನೋಟದಿಂದ ಭಸ್ಮವಾಗುತ್ತಾನೆ. ಆಗ ಶಿವನ ಅನುಚರರಲ್ಲಿ ಒಬ್ಬನಾದ ಚಿತ್ರಕರ್ಮನು ಈ ಭಸ್ಮದಿಂದ ಒಬ್ಬ ಮನುಷ್ಯನ ಆಕೃತಿಯನ್ನು ಚಿತ್ರಿಸುತ್ತಾನೆ. ಈ ಚಿತ್ರದ ಮೇಲೆ ಶಿವನ ದೃಷ್ಟಿ ಬೀಳುತ್ತದೆ. ತಕ್ಷಣವೇ ಆಕೃತಿ ಜೀವಂತವಾಗಿ ನಿಲ್ಲುತ್ತದೆ. ಈ ಚಿತ್ರಕರ್ಮನು ಈ ವ್ಯಕ್ತಿಗೆ ಶತರುದ್ರೀಯವನ್ನು ಹೇಳುತ್ತಾ ಶಿವನನ್ನು ಪ್ರಾರ್ಥಿಸುವಂತೆ ಸೂಚಿಸುತ್ತಾನೆ. ಸುಪ್ರೀತನಾದ ಶಿವನು ಅರವತ್ತು ಸಾವಿರವರ್ಷಗಳು ಈ ಪ್ರಪಂಚದ ಚಕ್ರಾಧಿಪತಿಯಾಗುವಂತೆ ಈ ವ್ಯಕ್ತಿಯನ್ನು ಅನುಗ್ರಹಿಸುವನು. ಈ ಸಮಾಚಾರವನ್ನು ಕೇಳಿದ ಬ್ರಹ್ಮನು ಆಶ್ಚರ್ಯ ಭರಿತನಾಗಿ 'ಭಂಡ್ ಭಂಡ್' ಎಂದು ಉದ್ಗರಿಸುತ್ತಾನೆ. ಆ ವ್ಯಕ್ತಿಗೆ ಇದರಿಂದ ಭಂಡ ಎಂಬ ನಾಮಧೇಯವೇ ಪ್ರಚಾರವಾಗುತ್ತದೆ. ಭಂಡನು ಕ್ರಮೇಣ ರಾಕ್ಷಸ ಪ್ರವೃತ್ತಿ ಬೆಳಸಿಕೊಂಡು 'ಭಂಡಾಸುರ'ನಾಗುತ್ತಾನೆ. ಶೋಣಿತಪುರವನ್ನು ತನ್ನ ಚಕ್ರಾಧಿಪತ್ಯದ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿರುತ್ತಾನೆ. ದೇವತೆಗಳಿಗೆಲ್ಲಾ ಚಿತ್ರಹಿಂಸೆ ಕೊಡುವುದೇ ಈತನಿಗೆ ಒಂದು ಹವ್ಯಾಸವಾಗುತ್ತದೆ. ಇದನ್ನು ಕಂಡ ನಾರದ ಮಹರ್ಷಿಯು ದೇವತೆಗಳ ಅಧಿಪತಿಯಾದ ದೇವೇಂದ್ರನನ್ನು ಭೇಟಿಮಾಡಿ ಪರಾಶಕ್ತಿಯನ್ನು ಕುರಿತು ಯಜ್ಞಮಾಡಿ ಭಂಡಾಸುರನನ್ನು ಎದುರಿಸಲು ಆ ದೇವತೆಯ ಸಹಾಯವನ್ನು ಪಡೆಯಬೇಕೆಂದು ಸೂಚಿಸುತ್ತಾನೆ. ಅದೇ ಪ್ರಕಾರವಾಗಿ ದೇವೇಂದ್ರನು ಬೃಹತ್ ಯಜ್ಞವನ್ನು ನೆರವೇರಿಸುತ್ತಾನೆ. ಇದರ ಅಂತ್ಯದಲ್ಲಿ ಯಜ್ಞಕುಂಡದಿಂದ ಒಂದು ದೊಡ್ಡ ಚಕ್ರದ ಮಧ್ಯೆ ಶೋಭಿಸುವ ಸುಂದರಳಾದ ದೇವಿಯು – ಬ್ರಹ್ಮ, ವಿಷ್ಣು, ಮಹೇಶ್ವರ [illegible] ಸ್ವರೂಪಿಣಿಯಾದ ದೇವಿಯು [illegible] ಪ್ರತ್ಯಕ್ಷಳಾಗುತ್ತಾಳೆ. [illegible] ನೋಡಿ [illegible] ದೇವಿಯು ಭಂಡಾಸುರನನ್ನು [illegible] ಕೊಲ್ಲುತ್ತೇನೆಂದು ವಾಗ್ದಾನ ಮಾಡುತ್ತಾಳೆ. [illegible]ಳಿಗೆ [illegible] ಎಂಬ [illegible] ಪತಿಯನ್ನು ಆರಿಸಿಕೊಳ್ಳುವಂತೆ ದೇವಿಗೆ ಬ್ರಹ್ಮನು ಸೂಚಿಸುತ್ತಾನೆ. ಇದಕ್ಕೆ ಸಮ್ಮತಿಸಿದ ದೇವಿಯು ಪುಷ್ಪಹಾರವೊಂದನ್ನು ಹಾರಿಬಿಡುತ್ತಾಳೆ. ಅದು ಮನೋಹರವಾದ ಕಾಮೇಶ್ವರ ಸ್ವರೂಪವನ್ನು ತಾಳಿದ್ದ ಶಿವನ ಕೊರಳಿಗೆ ಬೀಳುತ್ತದೆ. ದೇವತೆಗಳು ಅತ್ಯಂತ ಸಂಭ್ರಮದಿಂದ, ವಿಜೃಂಭಣೆಯಿಂದ ಇವರೀರ್ವರ ವಿವಾಹ ಮಹೋತ್ಸವವನ್ನು ನೆರವೇರಿಸುತ್ತಾರೆ; ಲಲಿತೆಯು ಕಾಮೇಶ್ವರಿಯಾಗುತ್ತಾಳೆ. ಈ ಸಮಾರಂಭದ ನಂತರ ದೇವತೆಗಳೆಲ್ಲರೂ ತಂತಮ್ಮ ಸ್ಥಾನಗಳಿಗೆ ತೆರಳುತ್ತಾರೆ. ತಕ್ಷಣವೇ ದೇವಿಯು ತಾನು ದೇವತೆಗಳಿಗೆ ಕೊಟ್ಟಿದ್ದ ವಚನ ಪಾಲನೆ ಕಾರ್ಯಕ್ಕೆ ತೊಡಗುತ್ತಾಳೆ. ರಥಗಳು, ಆನೆಗಳು, ಕುದುರೆಗಳು ಮತ್ತು ಸುಸಜ್ಜಿತವಾದ ಶಕ್ತಿಗಳ ಸೈನ್ಯದೊಡನೆ ಭಂಡಾಸುರನ ಮೇಲೆ ಯುದ್ಧಕ್ಕೆ ಹೊರಡುತ್ತಾಳೆ. ನಾಲ್ಕು ದಿನಗಳ ಘೋರ ಸಮರ ನಡೆದ [illegible] ಸೈನ್ಯವನ್ನು ಧ್ವಂಸಮಾಡುವಳು. ಅವನ ಅನುಯಾಯಿಗಳು ಎಲ್ಲರೂ ಅಸುನೀಗುತ್ತಾರೆ. ದೇವತೆಗಳಿಗೆಲ್ಲಾ ಸಂತಸವಾಗುತ್ತದೆ. ಲಲಿತೆಯನ್ನು ಹೊಗಳುತ್ತಾರೆ. ಇದೇ ಸಂದರ್ಭದಲ್ಲಿ ಶಿವನ ಹಣೆಗಣ್ಣಿನಿಂದ ಭಸ್ಮನಾದ ಪ್ರೇ[illegible] ಮನ್ಮಥನ ಪತ್ನಿ ರತಿಯು ಮೇಲೆ [illegible] ಕೊಡಬೇಕೆಂದು ಅವರೆಲ್ಲರೂ ಈ ದೇವಿಯನ್ನು ಪ್ರಾರ್ಥಿಸುತ್ತಾರೆ. ಇವರ ಪ್ರಾರ್ಥನೆಯನ್ನು ಮನ್ನಿಸಿ ದೇವಿಯು ಪ್ರೇಮಾಧಿಪತಿಗೆ ಅನಂಗಜನ್ಮ ಕೊಡುತ್ತಾಳೆ. ಶಂಕರ ಮೇರುಪರ್ವತ ಶಿಖರದಲ್ಲಿ ದೇವ ಶಿಲ್ಪಿಗಳಾದ ವಿಶ್ವಕರ್ಮ ಹಾಗೂ ಮಯನಿಂದ ನಿರ್ಮಿತವಾದ ಶ್ರೀನಗರದಲ್ಲಿ ತನ್ನ ಪ್ರಿಯಪತಿ ಕಾಮೇಶ್ವರನೊಡನೆ ನೆಲೆಸುತ್ತಾಳೆ. ಶ್ರೀ ಚಕ್ರವು ದೇವಿಯ, ಹಾಗೂ ಆಕೆಯ ರಾಜಧಾನಿ ಶ್ರೀಪುರದ ಸಂಕೇತ ಚಿತ್ರವಾಗಿದೆ. ಪಂಚ ದಶಾಕ್ಷರೀ ಮಂತ್ರವು ದೇವಿಯ ಸೂಕ್ಷ್ಮ ಶರೀರವಾಗಿದೆ. ಆದುದರಿಂದಲೇ ದೇವಿಯ ಭಕ್ತರು ಶ್ರೀಚಕ್ರವನ್ನು ಪೂಜಿಸುತ್ತಾರೆ. ಪಂಚದಶಾಕ್ಷರೀ ಮಂತ್ರ ಜಪಿಸುತ್ತಾರೆ. ಹಾಗೂ ಲಲಿತಾ ಪರಮೇಶ್ವರಿಯ ಆಜ್ಞಾನುಸಾರವಾಗಿ ವಾಗ್ದೇವಿಯೇ ರಚಿಸಿದ ಸಹಸ್ರನಾಮ ಸ್ತೋತ್ರ ಪಠಿಸುತ್ತಾರೆ.

ಸಿಂದೂರಾರುಣವಿಗ್ರಹಾಂ ತ್ರಿನಯನಾಂ ಮಾಣಿಕ್ಯಮೌಲಿಸ್ಫುರ
ತ್ತಾರಾನಾಯಕಶೇಖರಾಂ ಸ್ಮಿತಮುಖೀಮಾಪೀನವಕ್ಷೋರುಹಾಮ್ ।
ಪಾಣಿಭ್ಯಾಮಲಿಪೂರ್ಣರತ್ನಚಷಕಂ ರಕ್ತೋತ್ಪಲಂ ಬಿಭ್ರತೀಂ
ಸೌಮ್ಯಾಂ ರತ್ನಘಟಸ್ಥ ರಕ್ತಚರಣಾಂ ಧ್ಯಾಯೇತ್ ಪರಾಮಂಬಿಕಾಮ್ ॥

– ಸಿಂದೂರದಂತೆ ಕೆಂಬಣ್ಣದ ದೇಹವುಳ್ಳವಳೂ, ತ್ರಿನೇತ್ರಳೂ, ಮಾಣಿಕ್ಯದ ಕಿರೀಟದಲ್ಲಿ ಹೊಳೆಯುತ್ತಿರುವ ಚಂದ್ರನನ್ನು ಹೊಂದಿದವಳೂ, ತುಂಬಿದ ಎದೆಯನ್ನುಳ್ಳವಳೂ. ಕೈಗಳಲ್ಲಿ ರಕ್ತವರ್ಣದ ಕಮಲವನ್ನೂ, ಮದ್ಯ ತುಂಬಿದ ರತ್ನಪಾತ್ರೆಯನ್ನೂ ಹಿಡಿದು ಸೌಮ್ಯರೂಪಳಾಗಿ ರತ್ನಘಟದ ಮೇಲೆ ತನ್ನ ಕೆಂಪಾದ ಪಾದಗಳನ್ನು ಇಟ್ಟವಳೂ ಆದ ಪರಾಮಂಬಿಕೆಯನ್ನು ಧ್ಯಾನಿಸುವ.

ಶ್ರೀ ಎ. ಪಿ. ಶ್ರೀನಿವಾಸಮೂರ್ತಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರಂ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

## ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ ಪ್ರಾ 7–30 ಪ್ರಾ 8–30 |
| | | ಸಮರ್ಪಣ ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | ಪ್ರಾ 9–30 ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6–30 ರಾ 7–00 | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | ರಾ 8–45 ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

(8ನೇ ಪುಟದಿಂದ)

ಅರ್ಜುನ : ಕೃಷ್ಣ, ನಿನ್ನ ಶಾಂತವಾದ ಈ ಮಾನುಷ್ಯ ರೂಪವನ್ನು ನೋಡಿ ಈಗ ಸಮಾಧಾನವನ್ನು ಹೊಂದಿ ಹಿಂದಿನಂತೆ ಆಗಿರುವೆನು.

ಸುದುರ್ದರ್ಶಮಿದಂ ರೂಪಂ
ದೃಷ್ಟವಾನಸಿ ಯನ್ಮಮ ।
ದೇವಾ ಅಪ್ಯಸ್ಯ ರೂಪಸ್ಯ
ನಿತ್ಯಂ ದರ್ಶನಕಾಂಕ್ಷಿಣಃ ॥ 52

ಶ್ರೀಕೃಷ್ಣ : ಎಷ್ಟು ಮಾತ್ರವೂ ನೋಡುವುದಕ್ಕಾಗದ ನನ್ನ ಯಾವ ಈ ರೂಪವನ್ನು ನೋಡಿದೆಯೋ ಇದನ್ನು ದೇವತೆಗಳು ಕೂಡ ನೋಡಬೇಕೆಂದು ಹಾತೊರೆಯುತ್ತಾರೆ.

ನಾಹಂ ವೇದೈರ್ನ ತಪಸಾ
ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ
ದೃಷ್ಟವಾನಸಿ ಮಾಂ ಯಥಾ ॥ 53

ನನ್ನನ್ನು ಯಾವ ರೂಪದಲ್ಲಿ ನೋಡಿದೆಯೋ ಆ ಬಗೆಯಲ್ಲಿ ನನ್ನನ್ನು ವೇದಗಳ ಅಧ್ಯಯನ ಮಾಡಿದರೂ, ಉಪವಾಸ ವ್ರತವನ್ನು ನಡೆಸಿದವರೂ, ದಾನವನ್ನು ಕೊಟ್ಟವರೂ, ಯಜ್ಞವನ್ನು ನೆರವೇರಿಸಿದವರೂ ಕೂಡ ಕಾಣಲಾರರು.

ಭಕ್ತ್ಯಾ ತ್ವನನ್ಯಯಾ ಶಕ್ಯಃ
ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ
ಪ್ರವೇಷ್ಟುಂ ಚ ಪರಂತಪ ॥ 54

ಅರ್ಜುನ, ಅನನ್ಯವಾದ ಭಕ್ತಿಯಿಂದ ಮಾತ್ರವೇ ನನ್ನನ್ನು ತಿಳಿಯುವುದಕ್ಕೂ ಸಾಕ್ಷಾತ್ಕರಿಸುವುದಕ್ಕೂ ನನ್ನೊಳಗೆ ಸೇರುವುದಕ್ಕೂ ಸಾಧ್ಯ.

ಮತ್ಕರ್ಮಕೃನ್ಮತ್ಪರಮೋ
ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು
ಯಃ ಸ ಮಾಮೇತಿ ಪಾಂಡವ ॥ 55

ಅರ್ಜುನ, ಯಾವನು ನನಗೆ ಪ್ರೀತಿಯಾಗಲೆಂದು ಕರ್ಮವನ್ನು ಮಾಡುವನೋ, ನನ್ನನ್ನೇ ಗತಿಯೆಂದು ತಿಳಿಯುವನೋ, ನನ್ನನ್ನೇ ಭಜಿಸುವನೋ ಹೊರಗಣ ವಿಷಯದಲ್ಲಿ ಆಸಕ್ತಿ ಇಲ್ಲದಿರುವನೋ, ಯಾವ ಪ್ರಾಣಿಯಲ್ಲಿಯೂ ಹಗೆತನವಿಲ್ಲದಿರುವನೋ, ಅವನು ನನ್ನನ್ನೇ ಪಡೆಯುತ್ತಾನೆ.

ಇತಿ
ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಜ್ಞಾನಕರ್ಮ ಸಂನ್ಯಾಸಯೋಗೋ ನಾಮ ಏಕಾದಶೋಽಧ್ಯಾಯಃ ॥

11 ನೆಯ ಅಧ್ಯಾಯವು ಮುಗಿದುದು.

# ವಾರ್ತಾವಳಿ

## ತಿರುವಾಯ್ಯಾರಿನಲ್ಲಿ ಶ್ರೀ ತ್ಯಾಗರಾಜರ ಆರಾಧನೆ

ಕಳೆದ ಜನವರಿ ತಿಂಗಳಿನಲ್ಲಿ ತಿರುವಾಯ್ಯಾರಿನಲ್ಲಿ ತ್ಯಾಗರಾಜರ 137 ನೇ ಆರಾಧನಾ ಮಹೋತ್ಸವಗಳು 600 ಕ್ಕೂ ಮೀರಿದ ಸಂಗೀತಗಾರರ ಭಾಗವಹಿಸುವಿಕೆಯಿಂದ ತ್ಯಾ ಗ ರಾ ಜ ಆರಾಧನೆಯ ಇತಿಹಾಸದಲ್ಲೇ ಅತಿಶ್ರೇಷ್ಠವಾದವುಗಳಲ್ಲಿ ಒಂದು ಎಂದು ಹೆಸರು ಪಡೆಯಿತು.

ಐದುದಿನಗಳ ಆರಾಧನೆಯು ಕೇಂದ್ರ ವಾರ್ತಾ ಪ್ರಚಾರ ಇಲಾಖಾಮಂತ್ರಿ ಶ್ರೀ ಎಚ್. ಕೆ. ಎಲ್. ಭಗತ್ ಅವರಿಂದ ಉದ್ಘಾಟಿತವಾಗಿ ಆರು ನೂರಕ್ಕೂ ಮಿಕ್ಕಿದ ಸಂಗೀತಗಾರರು ಶಿಸ್ತು, ಸಂಯಮಗಳಿಂದ ತ್ಯಾಗರಾಜರಿಗೆ ತಮ್ಮ ಗೌರವವನ್ನು ಸೂಚಿಸುವಂತಾಯಿತು ಎಂದರೆ ತ್ಯಾಗರಾಜ ಸಭೆಯ ಕಾರ್ಯದರ್ಶಿಗಳಾದ ಶ್ರೀ ಕುನ್ನಕುಡಿ ಆರ್. ವೈದ್ಯನಾಥನ್ ಹಾಗೂ ಶ್ರೀ ಹರಿದ್ವಾರಮಂಗಲಂ ಎ. ಕೆ. ಪಳನಿವೇಲು ಅವರುಗಳ ಅಹರ್ನಿಶಿ ಪ್ರಯತ್ನವೂ ಬಲುಮಟ್ಟಿನ ಕಾರಣವಾಗಿದ್ದಿತೆನ್ನಬೇಕು.

ಈ ಬಾರಿ ಪಂಚರತ್ನ ಕೃತಿಗಳಸಮೂಹಗಾನವು ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿ ಹಾಗೂ ಶ್ರೀ ಶೆಮ್ಮಂಗುಡಿ ಶ್ರೀವಾಸ ಅಯ್ಯರ್ ಅವರ ನೇತೃತ್ವದಲ್ಲಿ ಅಸಂಖ್ಯ ಹಿರಿಯ ಸಂಗೀತ ವಿದ್ವಾಂಸರನ್ನು ಆಕರ್ಷಿಸಿತು. ಅಂದಿನ ಬೆಳಗ್ಗೆ ಹೆಚ್ಚು ಮಂದಿ ಹಿರಿಯವಿದ್ವಾಂಸರು ಉಂಛವೃತ್ತಿ ಭಜನೆಯಲ್ಲೂ ಭಾಗವಹಿಸಿದ್ದರು. ಈಚಿನ ವರ್ಷಗಳಲ್ಲಿ ನಿಂತುಹೋಗಿದ್ದ ಮಲ್ಲಾರಿಯು ನಲವತ್ತು ಜನ ನಾಗಸ್ವರ ವಿದ್ವಾಂಸರು ಹಾಗೂ ಅದೇ ಪ್ರಮಾಣದ ಇತರರ ಭಾಗವಹಿಸುವಿಕೆಯಿಂದ ಈ ಬಾರಿ ಪುನಃ ಆರಂಭವಾಗಿ ತ್ಯಾಗರಾಜರಿಗೆ ಭಕ್ತಿ ಪ್ರಣಾಮಗಳನ್ನರ್ಪಿಸುತ್ತ ತಿರುವಾಯ್ಯಾರಿನ ಬೀದಿಗಳಲ್ಲಿ ಆರುಗಂಟೆಗಳ ಕಾಲ ಮೆರವಣಿಗೆಯಲ್ಲಿ ನಡೆಯಿತು.

ಆಲಿಂಡಿಯಾ ರೇಡಿಯೋದವರು ರಾಷ್ಟ್ರೀಯ ಸಂಗೀತ ಕಾರ್ಯಕ್ರಮವಾಗಿ ಪ್ರಸಾರಮಾಡಿದ ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿ ಅವರ ಗಾಯನ ಅತ್ಯುತ್ತಮ ಕಾ ರ್ಯ ಕ್ರ ಮ ಗ ಳ ಲ್ಲಿ ಒಂದಾಗಿದ್ದಿತು. ಶ್ರೀಮತಿ ಗೀಟಾ ರಾಜನ್ ಅವರ ಸಂಗೀತವೂ, ಇಂಜಿಕ್ಕುಡಿ ಸೋದರರು, ಶ್ರೀ ಕಂದಸಾಮಿ ಹಾಗೂ ಶ್ರೀ ಗಣೇಶನ್ ಅವರ ನಾಗಸ್ವರವೂ, ಅತ್ಯುತ್ತಮವಾಗಿದ್ದವು. ಹಿರಿಯ ಸಂಗೀತಗಾರರಲ್ಲಿ ಶ್ರೀ ಕೆ. ಜೇಸುದಾಸು ಅವರು ತಮಗೆ ನೀಡಿದ 20 ನಿಮಿಷಗಳಲ್ಲಿ ಐದು ಕೃತಿಗಳನ್ನು ಹಾಡಿ ರಂಜಿಸಿದರು. ಮೆಂಡೋಲಿನ್ ವಾದನದಿಂದ ಕಿರಿಯ ಶ್ರೀ ಯು. ಶ್ರೀನಿವಾಸನ್ ಸಭಿಕರನ್ನು ಗೆದ್ದರು. ಬೊಂಬಾಯಿನ ಕಿರಿಯ ಶ್ರೀ ಬಾಲಾಜಿ ಸಹ ತನ್ನ ಮೃದಂಗವಾದನದಿಂದ ಗಮನಾರ್ಹರಾದರು.

ತಿರುಚ್ಚಿಯ ಬಾನುಲಿಯು ಈ ಬಾರಿಯ ಸಂಗೀತ ಸುಧೆಯನ್ನು ಪ್ರಸಾರಮಾಡಿದ್ದೇ ಅಲ್ಲದೆ ದೂರದರ್ಶನವೂ ಸಹ ಪ್ರಸಾರಮಾಡಿದ್ದು ಒಂದು ವಿಶೇಷವಾಗಿದ್ದಿತು. ಶ್ರೀ ಶೆಮ್ಮಂಗುಡಿ ಶ್ರೀನಿವಾಸ ಅಯ್ಯರ್ ಅವರು ಹೇಳಿದಂತೆ "ನಾನು ನೋಡಿದ ಅನೇಕ ಶ್ರೇಷ್ಠ ಆರಾಧನೆಗಳಲ್ಲಿ ಈ ಬಾರಿಯ ತ್ಯಾ ಗ ರಾ ಜ ಆ ರಾ ಧ ನೆ ಒಂದಾಗಿದ್ದಿತು."

( ಕೃಪೆ: ಹಿಂದೂ )

## ಬೆಂಗಳೂರಿನಿಂದ ತಿರುಪತಿಗೆ ವಿಮಾನಯಾನ

ಇಂಡಿಯನ್ ಏರ್ ಲೈನ್ಸ್‌ನವರ ವಿಮಾನವು ಬೆಂಗಳೂರಿನಿಂದ ತಿರುಪತಿಗೆ ಹಾಗೂ ತಿರುಪತಿಯಿಂದ ಬೆಂಗಳೂರಿಗೆ ವಾರದಲ್ಲಿ ನಾಲ್ಕುದಿನಗಳಲ್ಲಿ ಹೋಗಿ ಬರುವುದೆಂದು ವರದಿಯಾಗಿದೆ. ಮಂಗಳವಾರ, ಗುರುವಾರ, ಶನಿವಾರ ಭಾನುವಾರಗಳಲ್ಲಿ ಬೆಂಗಳೂರನ್ನು ಬೆಳಗ್ಗೆ 9-30ಕ್ಕೆ ಬಿಟ್ಟು ತಿರುಪತಿಯನ್ನು 10-15ಕ್ಕೆ ಸೇರುವುದೆಂದೂ, ತಿರುಪತಿಯನ್ನು 10-15ಕ್ಕೆ ಬಿಟ್ಟು ಬೆಂಗಳೂರನ್ನು 11-30ಕ್ಕೆ ಸೇರುವುದೆಂದೂ ತಿಳಿಸಲಾಗಿದೆ.

## ತವರಿಗೆ ಹಿಂದಿರುಗಿದ ಬಲದೇವ

ಕರ್ನಾಟಕದಿಂದ ತಿ. ತಿ. ದೇವಸ್ಥಾನಗಳಿಗೆ ಶ್ರೀ ವೆಂಕಟೇಶ್ವರಸ್ವಾಮಿ ಸೇವೆಗೆಂದು ನೀಡಲಾದ ಆನೆ ಬಲದೇವ 20 ವರ್ಷಗಳ ಸೇವೆ ಸಲ್ಲಿಸಿ ಕರ್ನಾಟಕಕ್ಕೆ ಹಿಂದಿರುಗಿದೆ.

ಶ್ರೀ ವೆಂಕಟೇಶ್ವರ ಸ್ವಾಮಿಯ ಸೇವೆಯಲ್ಲಿ ಹೆಚ್ಚು ಹೆಸರು ಪಡೆದ ಈ ಆನೆ ಈಚೆಗೆ ಹದ್ದುಮೀರಿ ಹೇಳಿದ ಮಾತು ಕೇಳದೆ ಬಂಧನಕ್ಕೆ ಒಳಗಾಗಿದ್ದಿತು. ತಿ.ತಿ.ದೇ. ಡೈರಿಫಾರಂನ ಒಂದುಮೂಲೆಗೆ ಕಬ್ಬಿಣದ ಸರಪಳಿಯಿಂದ ಬಂಧಿತವಾಗಿ ಘೀಂಕರಿಸುತ್ತ ಆಕ್ರೋಶ ಮಾಡುತ್ತ ಇದ್ದಿತು. ತಿ. ತಿ. ದೇ. ಕರ್ನಾಟಕ ಸರ್ಕಾರಕ್ಕೆ ಪತ್ರ ಬರೆದು ಮುಂದಿನ ಕ್ರಮದ ಬಗ್ಗೆ ವಿಚಾರಿಸಿದಾಗ ಕರ್ನಾಟಕ ಅದನ್ನು ಹಿಂದೆ ಪಡೆಯಲು ಒಪ್ಪಿ ಶಿವಮೊಗ್ಗದ ಡಾ॥ ಬಸವರಾಜಪ್ಪ ನವರನ್ನು ಐವರು ಮಾವಟಿಗರೊಂದಿಗೆ ತಿರುಪತಿಗೆ ಕಳುಹಿಸಿತು. ಒಬ್ಬ ಮಾವಟಿಗ ಹತ್ತುದಿನಗಳು ಆನೆಯ ಜೊತೆಗಿದ್ದು ಆನೆಯ ಸ್ವಭಾವವನ್ನು ಪರಿಚಯಿಸಿಕೊಂಡ ಮೇಲೆ ಅದನ್ನು ನಿಧಾನವಾಗಿ ನಡೆಸಿಕೊಂಡು ಬಂದು ಅದಕ್ಕಾಗಿ ತರಲಾದ ಲಾರಿಯನ್ನು ಹತ್ತಿಸಲಾಯಿತು.

ಈ ಬೀಳ್ಕೊಡುಗೆಯಲ್ಲಿ ಸುತ್ತಲೂ ಸಾರ್ವಜನಿಕರು ಸೇರಿ ಗೋವಿಂದ ನಾಮ ಸ್ಮರಣೆ ಮಾಡುತ್ತಿದ್ದರು. ಬಂಧಿತ ಸ್ಥಳದಿಂದ ಲಾರಿಯವರೆಗೆ ಗಂಭೀರವಾಗಿ ಬಂದ ಬಲದೇವ ಬೆಟ್ಟದ ತಿರುನಾಮಗಳ ಕಡೆ ತಿರುಗಿ ಗೋವಿಂದನನ್ನು ಸ್ಮರಿಸುವಂತೆ ಘೀಂಕಾರ ಮಾಡಿತು. ನೆರೆದ ಜನರ ಕಣ್ಣಲ್ಲಿ ನೀರು ತರಿಸುವಂತಾಯಿತು. ಡೈರಿಫಾರಂನ ಸೂಪರಿಂಟೆಂಡೆಂಟ್ ಡಾ॥ ಕೊಂಡಾರೆಡ್ಡಿ ಅವರ ನೇತೃತ್ವದಲ್ಲಿ ಸೇರಿದ್ದ 200 ಕ್ಕೂ ಮಿಕ್ಕಿದ ಜನ ದುಗುಡ ದುಮ್ಮಾನಗಳಿಂದ ಬಲದೇವನನ್ನು ಬೀಳ್ಕೊಟ್ಟರು.

ಬಲದೇವ ಇನ್ನುಮುಂದೆ ಶಿವಮೊಗ್ಗದ ಕಾಡಿನಲ್ಲಿ ಸಾಮಾನ್ಯ ಆನೆ ಮಾತ್ರವೇ.

## ಸಂಸ್ಕೃತವನ್ನು ಸುಲಭಗೊಳಿಸಬೇಕು

—ಕೇಂದ್ರ ಶಿಕ್ಷಣಮಂತ್ರಿ ಶ್ರೀಮತಿ ಶೀಲಾಕೌಲ್

ಸಂಸ್ಕೃತವು ಸಾರ್ವಜನಿಕರಿಗೆ ಸುಲಭಗ್ರಾಹ್ಯವಾಗುವಂತೆ ಮಾಡುವ ಪ್ರಯತ್ನಗಳು ನಡೆಯಬೇಕಿದೆ ಎಂದು ಕೇಂದ್ರಮಂತ್ರಿ ಶ್ರೀಮತಿ ಶೀಲಾ ಕೌಲ 'ಕರೆನೀಡಿದರು.

ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಘಟಿಕೋತ್ಸವದಲ್ಲಿ ಮಾತನಾಡುತ್ತಿದ್ದ

ಶ್ರೀಮತಿ ಶೀಲಾಕೌಲ್ ಸರ್ವರಿಗೂ ಸುಲಭದಲ್ಲಿ ದೊರೆಯುವಂತಹ ಪಠ್ಯಪುಸ್ತಕಗಳು ಸಾಲದೆಂದೂ ಈ ದಿಸೆಯಲ್ಲಿ ಹಿರಿಯ ಶೈಕ್ಷಣಿಕ ಸಂಸ್ಥೆಗಳು ಕೆಲಸ ಮಾಡುವ ಮೂಲಕ ಸಂಸ್ಕೃತ ಕಠಿಣವಾದ ಭಾಷೆ ಎಂಬ ಅಪಪ್ರಥೆಯನ್ನು ಹೋಗಲಾಡಿಸಬೇಕೆಂದೂ ನುಡಿದರು.

ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ವಿಸ್ತರಣ ವಿಭಾಗದ ಕಟ್ಟಡಕ್ಕೆ (ಸುಮಾರು 17 ಲಕ್ಷ ರೂಗಳ ವೆಚ್ಚದ ನಿರ್ಮಾಣ) ಶ್ರೀಮತಿಯವರು ಶಂಕುಸ್ಥಾಪನೆಯನ್ನೂ ಮಾಡಿದರು.

ಕೇಂದ್ರ ಶಿಕ್ಷಣ ಖಾತೆಯ ಸಹ ಶಿಕ್ಷಣ ಸಲಹೆಗಾರ ಡಾ॥ ಆರ್. ಕೆ. ಶರ್ಮ ಅವರ ಅಧ್ಯಕ್ಷತೆಯಲ್ಲಿ ಕೇಂದ್ರೀಯ ಸಂಸ್ಕೃತ ಸಂಸ್ಥಾನದ ನಿರ್ದೇಶಕ ಶ್ರೀ ಮಂಡಂ ಮಿಶ್ರ ಅವರು ಡಾಕ್ಟರೇಟ್ ಹಾಗೂ ಇನ್ನಿತರ ಪದವಿಗಳನ್ನು ಸ್ನಾತಕರಿಗೆ ನೀಡಿದರು. ವಿದ್ಯಾಪೀಠದ ಪ್ರಾಂಶುಪಾಲ ಡಾ॥ ಎಂ. ಡಿ. ಬಾಲಸುಬ್ರಹ್ಮಣ್ಯಂ ಅವರು ವರದಿಯನ್ನು ಓದಿದರು.

## ಸನಾತನಧರ್ಮ ಸರ್ವರಿಗೂ ಸಮೀಪವಾಗಬೇಕು

—ಕಂಚಿ ಕಾಮಕೋಟಿ ಪೀಠಾಧಿಪತಿಗಳು

ಸನಾತನ ಧರ್ಮವನ್ನು ಸರ್ವರಿಗೂ ಸಮೀಪವಾಗುವಂತೆ ಮಾಡಬೇಕಾದ ಅಗತ್ಯವನ್ನು ಕುರಿತು ಪುಲಿಚೆರ್ಲದಲ್ಲಿ ತಿ. ತಿ. ದೇ. ಬೋರ್ಡ್ ಸದಸ್ಯರ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತ ಕಂಚಿಯ ಪೀಠಾಧಿಪತಿ ಜಗದ್ಗುರುಗಳು ಸಾಮೂಹಿಕ ಕಾರ್ಯಕ್ರಮಗಳಿಗಿಂತ ವೈಯುಕ್ತಿಕ ನೆಲೆಯಲ್ಲಿನ ಕಾರ್ಯಕ್ರಮಗಳು ಹೆಚ್ಚು ಉಪಯುಕ್ತವೆಂದೂ ಆಂಧ್ರಪ್ರದೇಶದ ಯಾವುದಾದರೂ ಮೂರು ಸಮಿತಿಗಳ ಕ್ಷೇತ್ರದಲ್ಲಿ ಪ್ರಾಯೋಗಿಕವಾಗಿ ಸನಾತನ ಧರ್ಮದ ನೈತಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ ಮೌಲ್ಯಗಳನ್ನು ಪ್ರಚಾರ ಮಾಡುವುದು ಉಪಯುಕ್ತವಾಗುವುದೆಂದೂ ನುಡಿದರು.

ತಿ. ತಿ. ದೇವಸ್ಥಾನಗಳು ಗಿರಿಜನರ ಕ್ಷೇತ್ರಗಳಲ್ಲಿ ಪ್ರಾರ್ಥನಾಮಂದಿರಗಳನ್ನು ನಿರ್ಮಿಸಬೇಕೆಂದೂ, ಹಿಂದುಳಿದ ವರ್ಗಗಳ ಹಾಸ್ಟೆಲ್‌ಗಳಿಗೆ ಧಾರ್ಮಿಕ ಸಾಹಿತ್ಯ ದೊರೆಯುವಂತೆ ಮಾಡಬೇಕೆಂದೂ ಹಳ್ಳಿಗಳಲ್ಲಿ ಹಾಗೂ ಕೊಳೆಗೇರಿಗಳಲ್ಲಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯಕ್ರಮಗಳನ್ನು ತೀವ್ರಗೊಳಿಸಬೇಕೆಂದೂ ಅವರು ನುಡಿದರು.

ತಿ. ತಿ. ದೇವಸ್ಥಾನಗಳು ದೇಶದ ವಿವಿಧ ಭಾಗಗಳಲ್ಲಿ ದೇವಾಲಯ ನಿರ್ಮಾಣ, ಜೀರ್ಣೋದ್ಧಾರ ಕಾರ್ಯವನ್ನು ಹಿರಿಯ ಪ್ರಮಾಣದಲ್ಲಿ ಕೈಕೊಳ್ಳಬೇಕೆಂದೂ ಅವರು ಕರೆನೀಡಿದರು.

ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಅವರು ಹಿಂದೂ ಧರ್ಮ ಪ್ರಸಾರದಲ್ಲಿ ದೇವಸ್ಥಾನಗಳು ಕೈಕೊಂಡಿರುವ ಕಾರ್ಯಗಳನ್ನು ವಿವರಿಸುತ್ತ, ಸ್ವಾಮಿಗಳು ನೀಡಿದ ಸಲಹೆಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವುದಾಗಿ ತಿಳಿಸಿದರು.

ಶ್ರೀ ಸಮುದ್ರಾಲ ಲಕ್ಷ್ಮಣಯ್ಯ, (ಕಾರ್ಯದರ್ಶಿ, ಎಚ್. ಡಿ. ಆರ್. ಎಸ್.) ಹಾಗೂ ಬೋರ್ಡ್ ಸದಸ್ಯರಾದ ಶ್ರೀ ಎಲ್. ನರಸಿಂಗ

ನಾಯಕ್, ಶ್ರೀ ಪಿ. ವೆಂಕಟೇಶ್ವರುಲು, ಶ್ರೀ ಕೆ. ಅಪ್ಪಲನಾಯುಡು, ಹಾಗೂ ಶ್ರೀಮತಿ ಎಸ್. ರಾಜಕುಮಾರಿ ಅವರು ಸಭೆಯಲ್ಲಿ ಭಾಗ ವಹಿಸಿದ್ದರು.

## ಸಂಸ್ಕೃತದಲ್ಲಿ ಬೀದಿನಾಟಕ

ಸಂಸ್ಕೃತ ಪ್ರಚಾರ ಪರಿಷತ್ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದ ಎದುರು ಸಂಸ್ಕೃತ ಬೀದಿನಾಟಕವನ್ನು ನಡೆಸಿ, ಪ್ರಜೆಗಳಲ್ಲಿ ಸಂಸ್ಕೃತದ ಬಗ್ಗೆ ಆಸಕ್ತಿಯನ್ನುಂಟುಮಾಡಿದರು.

ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ವಿದ್ಯಾರ್ಥಿಗಳು ಭಾಗವಹಿಸಿದ ಈ ಬೀದಿನಾಟಕ ಸಮಕಾಲೀನ ರಾಜಕೀಯ, ನಿರುದ್ಯೋಗ, ಮೊದಲಾದವುಗಳನ್ನು ವಸ್ತುವಾಗಿ ಹೊಂದಿದ್ದು ಹೆಚ್ಚು ಜನರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಯಿತು.

ಸಂಸ್ಕೃತ ಪ್ರಚಾರ ಪರಿಷತ್ ಆಗಾಗ ಉಚಿತ ಸಂಭಾಷಣಾ ಶಿಕ್ಷಣ ಶಿಬಿರಗಳನ್ನು ಏರ್ಪಡಿಸಿ ಜನಸಾಮಾನ್ಯರಲ್ಲಿ ಸಂಸ್ಕೃತದ ಬಗ್ಗೆ ಆದರ ಆಸಕ್ತಿ ಮೂಡಿಸಬೇಕೆಂದು ಪ್ರಯತ್ನ ಪಡುತ್ತಿದೆ. ಅದರ ಅಂಗವಾಗಿಯೇ ಈ ಸಂಸ್ಕೃತದ ಬೀದಿ ನಾಟಕವೂ ಏರ್ಪಟ್ಟಿದ್ದಿತು; ಈ ಬಾರಿಯ ಶಿಕ್ಷಣ ಶಿಬಿರ ಫೆ॥ 3 ರಿಂದ ಹತ್ತು ದಿನಗಳಲ್ಲಿ ದಿನವೂ ಸಂಜೆ6ರಿಂದ 8 ರವರೆಗೆ ನಡೆದವು ಈ ಶಿಬಿರವನ್ನು ಶ್ರೀ ಸಿ. ಎಂ. ಕೃಷ್ಣ ಶಾಸ್ತ್ರಿ ನಿರ್ವಹಿಸಿದರು.

## ಮೂರುಕಡೆ ತಿ. ತಿ. ದೇ. ಕಲ್ಯಾಣ ಮಂಟಪ

ಗುಂತಕಲ್ಲು ಮಂಚಿರ್ಯಾಲ, ಜಿಲ್ಲೆಲ್ಲಮೂಡಿ ಗಳಲ್ಲಿ ತಿ. ತಿ. ದೇ. ಕಲ್ಯಾಣಮಂಟಪಗಳನ್ನು ಒಂದೊಂದೂ ಏಳುಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಬೇಕೆಂದು ತಿ.ತಿ.ದೇ. ಆಡಳಿತ ನಿರ್ವಾಹಕ ಮಂಡಳಿ ತೀರ್ಮಾನಿಸಿದೆ.

## ವೈಕುಂಠ ಏಕಾದಶಿಯಂದು ೪.೪. ಲಕ್ಷರೂ ಆದಾಯ

ಜನವರಿ 14 ರಂದು ವೈಕುಂಠ ಏಕಾದಶಿ ಸಂದರ್ಭದಲ್ಲಿ ತಿರುಮಲೆಯಲ್ಲಿ 44 ಸಾವಿರಕ್ಕೂ ಹೆಚ್ಚು ಮಂದಿ ಸ್ವಾಮಿಯನ್ನು ದರ್ಶಿಸಿದರು. ಅಂದಿನ ಹುಂಡಿಯ ಆದಾಯ 3.35900 ರೂಗಳೂ, 1.04585 ರೂಗಳು ವಗಪ್ಪಡಿ ಆದಾಯವೂ ಆಗಿದ್ದಿತು.

## ತಿರುಮಲೆಯಲ್ಲಿ ತಮಿಳುನಾಡಿನ ಮಂತ್ರಿ

ತಮಿಳುನಾಡಿನ ಮಧ್ಯಾಹ್ನ ಭೋಜನ ಪ್ರಣಾಳಿ ಮಂತ್ರಿ ಶ್ರೀ ಸೌಂದರರಾಜನ್ ಅವರು ತಿರುಮಲೆಗೆ ಕುಟುಂಬ ಸಮೇತ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿದರು. ಅವರನ್ನು ತಿ.ತಿ.ದೇ. ಅಧಿಕಾರಿಗಳು ದೇವಸ್ಥಾನಕ್ಕೆ ಸ್ವಾಗತಿಸಿದರು.

## ತಿರುಮಲೇಶನ ಸನ್ನಿಧಿಯಲ್ಲಿ ಅರ್ಥಶಾಖಾಮಂತ್ರಿಗಳು

ಭಾರತದ ಕೇಂದ್ರ ಅರ್ಥಶಾಖಾಮಂತ್ರಿ ಶ್ರೀ ಪ್ರಣಬ್ ಮುಖರ್ಜಿ ಅವರು ತಿರುಮಲೆಗೆ ಆಗಮಿಸಿ ತಿರುಮಲೆಯ ಗುಡಿಯ ಸ್ವಾಮಿಯ ಸಂದರ್ಶನ ಪಡೆದರು. ತಿರುಪತಿಗೆ ಪ್ರತ್ಯೇಕ ವಿಮಾನದಲ್ಲಿ ಆಗಮಿಸಿದ ಶ್ರೀ ಪ್ರಣಬ್ ಮುಖರ್ಜಿ ಹಾಗೂ ಕುಟುಂಬದವರನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿರೆಡ್ಡಿ ಅವರು ದೇವಾಲಯಕ್ಕೆ ಸ್ವಾಗತಿಸಿದರು.

ಅದೇ ದಿನ ಬೆಳಗ್ಗೆ ಆಂಧ್ರಪ್ರದೇಶದ ಅರ್ಥ ಶಾಖಾಮಂತ್ರಿ ಶ್ರೀ ನಾದೇಂಡ್ಲ ಭಾಸ್ಕರ ರಾಯರು ತಿರುಮಲೇಶನನ್ನು ಸಂದರ್ಶಿಸಿದ್ದರು. ಅವರು ಹಿಂದಿನ ದಿನ ರಾತ್ರಿ 12 ಗಂಟೆಗೆ ತಿರುಮಲೆಯನ್ನು ಸೇರಿದ್ದರು.

## ತಿರುಮಲೆಯಲ್ಲಿ ಪ. ಬಂಗಾಳದ ಮಂತ್ರಿ

ಪಶ್ಚಿಮ ಬಂಗಾಳ ಪ್ರಾಂತ್ಯದ ಆರೋಗ್ಯ ಶಾಖಾ ಮಂತ್ರಿ ಶ್ರೀ ಅಂಬರೀಷ ಮುಖರ್ಜಿ ಈಚೆಗೆ ತಿರುಮಲೆಗೆ ಆಗಮಿಸಿದ್ದರು. ಆತ ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಯ ಆಲಯದ ವಿಮಾನ ವೆಂಕಟೇಶ್ವರನ ಬಳಿ ನಿಂತು ತಿರುಮಲೇಶನಿಗೆ ನಮಸ್ಕರಿಸಿದರು. ಕೇವಲ ತನ್ನೊಬ್ಬನಿಂದ ಇತರ ಭಕ್ತರಿಗೆ ಇಕ್ಕಟ್ಟು ಉಂಟಾಗಬಾರದೆಂದು ತಾನು ಹೀಗೆ ಮಾಡಿದೆನೆಂದು ಅವರು ತಿಳಿಸಿದರು.

## ಸಹ ಕಾರ್ಯನಿರ್ವಹಣಾಧಿಕಾರಿ ಪದವಿಕಾಲದ ವಿಸ್ತರಣ

ತಿ.ತಿ. ದೇವಸ್ಥಾನಗಳ ಸಹಕಾರ್ಯ ನಿರ್ವಹಣಾಧಿಕಾರಿಯಾಗಿ ಕೆಲಸನಿರ್ವಹಿಸುತ್ತಿರುವ ಐ.ಎ.ಎಸ್. ಅಧಿಕಾರಿ ಶ್ರೀ ಡಿ. ಸುಬ್ಬರಾಯುಲು ಅವರ ಪದವಿಯ ಕಾಲವನ್ನು ಒಂದು ವರ್ಷಕಾಲ ಹೆಚ್ಚಿಸಲು ರಾಜ್ಯಸರ್ಕಾರ ಒಪ್ಪಿದೆ.

1982 ರ ಜನವರಿ 31 ರಂದು 58 ವರ್ಷಗಳನ್ನು ತಲುಪಿದ ಶ್ರೀ ಸುಬ್ಬರಾಯುಲು ಅವರು ಪ್ರಭುತ್ವ ಸೇವೆಯಿಂದ ನಿವೃತ್ತರಾದರು. ಆಗ ಅವರು ಸಹಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದರು. ಅನಂತರ ಅವರ ಸೇವಾವಧಿಯನ್ನು ಸರಕಾರ ಎರಡುವರ್ಷ ಒಂದೊಂದು ವರ್ಷವೇ ವಿಸ್ತರಿಸುತ್ತ ಬಂದಿತು. 1984 ರಲ್ಲಿ ಮುಗಿಯಲಿದ್ದ ಈ ವಿಸ್ತರಣೆಯನ್ನು ಮತ್ತೆ ಎರಡು ವರ್ಷ ಮುಂದುವರಿಸಬೇಕೆಂದು ತಿ.ತಿ. ದೇವಸ್ಥಾನಗಳ ಆಡಳಿತ ನಿರ್ವಾಹಕ ಮಂಡಳಿ ಶಿಫಾರಸ್ ಮಾಡಿದ್ದಿತು. ಹಾಗಾಗಿ ಒಂದು ವರ್ಷದ ವಿಸ್ತರಣೆಯನ್ನು ಒಪ್ಪುತ್ತ ಸರ್ಕಾರ ಆಜ್ಞೆಯನ್ನು ಹೊರಡಿಸಿದೆ.

## ತಿ.ತಿ.ದೇ. ವಿದ್ಯಾಧಿಕಾರಿಯಾಗಿ ಚಂದ್ರಶೇಖರ ನಾಯುಡು

ತಿ.ತಿ.ದೇ. ವಿದ್ಯಾಶಾಖೆಯ ಅಧಿಕಾರಿಯಾಗಿ ಶ್ರೀ ಪಿ. ಚಂದ್ರಶೇಖರ ನಾಯುಡು ಅವರು ಅಧಿಕಾರವನ್ನು ಸ್ವೀಕರಿಸಿದ್ದಾರೆ. ಈ ಹಿಂದೆ ವಿದ್ಯಾಧಿಕಾರಿಯಾಗಿದ್ದ ಪ್ರೊ॥ ರಂಗಯ್ಯನವರು ಈಚೆಗೆ ಮಹಿಳಾ ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿ ಅಧಿಕಾರವನ್ನು ಸ್ವೀಕರಿಸಿದುದರಿಂದ ಈ ಹುದ್ದೆ ಖಾಲಿಯಾಗಿದ್ದಿತು. ಈಗ ವಿದ್ಯಾಧಿಕಾರಿಯಾಗಿರುವ ಶ್ರೀ ಪಿ. ಚಂದ್ರಶೇಖರನಾಯುಡು ತಿ.ತಿ. ದೇವಸ್ಥಾನಗಳ ಶ್ರೀ ಗೋವಿಂದರಾಜ ಆರ್ಟ್ಸ್ ಕಾಲೇಜಿನಲ್ಲಿ ಕಾಮರ್ಸ್ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಕೆಲಸಮಾಡುತ್ತಿದ್ದರು. ಅವರು ಈ ಮೊದಲು ಆರು ವರ್ಷಗಳಕಾಲ ಎನ್.ಸಿ.ಸಿ. ಯ ಪೂರ್ಣಾವಧಿ ಅಧಿಕಾರಿಯಾಗಿಯೂ ಕೆಲಸ ಮಾಡಿದ್ದರು.

## ರಕ್ಷಾಪತ್ರ ಚಿತ್ರಸೂಚಿ

ಮುಖಪುಟ: ಸೀತಾ ಲಕ್ಷ್ಮಣಸಹಿತ ಶ್ರೀ ಕೋದಂಡರಾಮಸ್ವಾಮಿ.

ಹಿಂಬದಿಯ ಪುಟ: ಚೈತ್ರೋದಯಃ ಚಿತ್ರಃ ಶ್ರೀ ಸತ್ಯನಾರಾಯಣ.

ಒಳ ಪುಟಗಳಲ್ಲಿ: ಶ್ರೀ ಕೋದಂಡರಾಮ ಸ್ವಾಮಿ ರಥೋತ್ಸವ ಚಿತ್ರ ಹಾಗೂ ನಾಗಲಾಪುರದ ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವದ ಒಂದು ಚಿತ್ರ.

## 1984

# ಮೇ ತಿಂಗಳಿನ ಮುಖ್ಯದಿನಗಳು

| | | |
|---|---|---|
| ?. | ಶುಕ್ರವಾರ | ಕರ್ತರಿ ಪ್ರಾರಂಭ, ಬಸವಜಯಂತಿ |
| 5. | ಶನಿವಾರ | ಶ್ರೀಭಾಷ್ಯಕಾರರ ಶಾತ್ತುಮೊರೆ |
| 6. | ಭಾನುವಾರ | ಶ್ರೀ ಶಂಕರಾಚಾರ್ಯ ಜಯಂತಿ |
| 8. | ಮಂಗಳವಾರ | ತಿರುಪತಿ ಗಂಗಜಾತ್ರೆ ಆರಂಭ |
| 10. | ಶನಿವಾರ | ನಿಜಕರ್ತರಿ ಪ್ರಾರಂಭ |
| 13. | ಭಾನುವಾರ | ನಾರಾಯಣವನಂ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಾರಂಭ |
| 14. | ಸೋಮವಾರ | ಶ್ರೀವೈಷ್ಣವ ನೃಸಿಂಹ ಜಯಂತಿ |
| 15. | ಮಂಗಳವಾರ | ತಿರುಪತಿ ಗಂಗಜಾತ್ರೆ ಸಮಾಪ್ತಿ |
| 17. | ಗುರುವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಗರುಡೋತ್ಸವ |
| 20. | ಭಾನುವಾರ | ,, ,, ರಥೋತ್ಸವ |
| 21. | ಸೋಮವಾರ | ,, ,, ಬ್ರಹ್ಮೋತ್ಸವ ಅವಭೃತ |
| 25. | ಶುಕ್ರವಾರ | ಹನುಮಜ್ಜಯಂತಿ |
| 28. | ಸೋಮವಾರ | ಕರ್ತರಿ ತ್ಯಾಗ. |

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ - — ಮೇ 1984**

**ಶ್ರೀ ನೃಸಿಂಹದರ್ಶನಂ**
– ಡಾ॥ ಎಸ್. ನರಸಿಂಹಾಚಾರ್ಯ

**ಸುಭಾಷಿತ ಸ್ವಾರಸ್ಯ**
– ವಿದ್ವಾನ್ ಬ. ನ. ಗುಂಡೂರಾವ್

**ಶ್ರೀ ಹನುಮ ಸುಪ್ರಭಾತ**
– ಕವಿತಾಕೃಷ್ಣ

**ಶ್ರೀ ಶಂಕರ ಭಗವತ್ಪಾದರು— ಅವರ ಅನುಯಾಯಿಗಳು**
– ಡಾ॥ ಎಸ್ ಅನಂತರಂಗಾಚಾರ್ಯ

**ದಾಸರು ಕಂಡ ಅಹೋಬಿಲ**
– ಡಾ॥ ಕೆ. ಸರ್ವೋತ್ತಮನ್

**ಪಂಚಮುಖ ಆಂಜನೇಯ**
– ಕೆ. ವಾದಿರಾಜಾರಾವ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಬರೆಯಿರಿ.

ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.



## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಗಳು

ದೇಶ ವಿದೇಶಗಳಲ್ಲಿರುವ ಹರಡಿರುವ ವಿವಿಧ ಕಡೆಗಳ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಗಳ ಬಗ್ಗೆ ಒಂದು ಸಮಗ್ರ ಕೋಶವೊಂದನ್ನು ಹೊರತರಲು ತಿ. ತಿ. ದೇ ನಿಶ್ಚಯಿಸಿದೆ. ಹಾಗಾಗಿ ನಿಮ್ಮ ನಿಮ್ಮ ಸ್ಥಳಗಳಲ್ಲಿನ ಶ್ರೀ ವೆಂಕಟೇಶ್ವರಸ್ವಾಮಿಯ ದೇವಾಲಯಗಳ ಬಗ್ಗೆ ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಹಿನ್ನೆಲೆ, ಶಿಲ್ಪ ಕಲೆ, ವಾಸ್ತು ವಿವರಣೆಗಳೊಡನೆ ಲೇಖನಗಳನ್ನು ಕಳುಹಿಸಿಕೊಡಬೇಕೆಂದು ಕೋರಲಾಗಿದೆ. ದೇವಾಲಯದ ಬಳಿಯ ರಸ್ತೆ – ರೈಲು, ಸೌಲಭ್ಯ ವಸತಿ ಸೌಕರ್ಯಗಳನ್ನೂ, ಫೋಟೋಗಳನ್ನೂ ಒಳಗೊಂಡಿರಬೇಕೆಂದು ಸೂಚಿಸಲಾಗಿದೆ. ಲೇಖನಗಳು ಆಂಗ್ಲಭಾಷೆಯಲ್ಲಿದ್ದಲ್ಲಿ ಹೆಚ್ಚು ಅನುಕೂಲಕರ.

ಮಿಕ್ಕ ವಿವರಗಳಿಗೆ:–

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ – 517501
ಚಿತ್ತೂರು ಜಿಲ್ಲೆ, ಆಂ.ಪ್ರ.

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

